# ಚಂದಮಾಮ ಕ್ಯಾಮಲ್

## ಬಣ್ಣಹಾಕುವ ಸ್ಪರ್ಧೆ

ಪ್ರವೇಶಧನವಿಲ್ಲ





**ಬಹುಮಾನ ಗಳಿಸಿರಿ.**

ಕ್ಯಾಮಲ್ — ಪ್ರಥಮ ಬಹುಮಾನ ರೂ. 15
ಕ್ಯಾಮಲ್ — ದ್ವಿತೀಯ ಬಹುಮಾನ ರೂ. 10
ಕ್ಯಾಮಲ್ — ತೃತೀಯ ಬಹುಮಾನ ರೂ. 5
ಕ್ಯಾಮಲ್ — 5 ಪ್ರೋತ್ಸಾಹಕ ಬಹುಮಾನಗಳು
ಕ್ಯಾಮಲ್ — 10 ಸರ್ಟಿಫಿಕೇಟ್‌ಗಳು

ಇಲ್ಲಿ ಗೆರೆಯ ಉದ್ದಕ್ಕೂ ಕತ್ತರಿಸಿ.

ಕೇವಲ 12 ವರ್ಷದ ವರೆಗಿನ ಪ್ರಾಯದ ವಿದ್ಯಾರ್ಥಿಗಳು ಭಾಗವಹಿಸಬಹುದು ■ ಮೇಲಿನ ಚಿತ್ರಕ್ಕೆ ಯಾವುದೇ 'ಕ್ಯಾಮಲ್' ಬಣ್ಣಗಳಿಂದ ಬಣ್ಣ ಹಾಕಿರಿ ■ ಬಣ್ಣ ಹಾಕಿದ ಪ್ರವೇಶಪತ್ರಗಳನ್ನು ಕೆಳಗಿನ ವಿಳಾಸಕ್ಕೆ ಕಳಿಸಿರಿ

**P.B. No. 9928, COLABA, Bombay-400 005.**

ಫಲಿತಾಂಶವು ಅಂತಿಮ ನಿರ್ಣಯವಾಗಿದೆ, ಮತ್ತು ಇದರ ಸಲುವಾಗಿ ಪತ್ರವ್ಯವಹಾರಕ್ಕೆ ಗಮನ ಕೊಡಲಾಗುವುದಿಲ್ಲ.

**Name** ______________________________ **Age** ____________________

**Address** ____________________________________________________

ದಯವಿಟ್ಟು ನಿಮ್ಮ ಹೆಸರು ಮತ್ತು ವಿಳಾಸವನ್ನು ಇಂಗ್ಲಿಷಿನಲ್ಲಿ ಬರೆಯಿರಿ.

ದಯವಿಟ್ಟು ಚಿತ್ರವನ್ನು ಪೂರ್ತಿಯಾಗಿ ಬಣ್ಣದಿಂದ ತುಂಬಿರಿ.

**ಪ್ರವೇಶಪತ್ರಗಳನ್ನು ಕಳುಹಿಸುವ ಕೊನೆಯ ತಾರೀಕು : *31-8-1979***

Vision

**CONTEST NO 10**



# ಚಂದಮಾಮ

ಆಗಸ್ಟ್ 1979



## ಈ ಸಂಚಿಕೆಯಲ್ಲಿ


ಪ್ರಶ್ನೋತ್ತರಗಳು ... ೬
ಅಸಮೀಕ್ಷಕಾರಿತ್ವ ... ೭
ಕರಡಿ ಕೆಂಗಣ್ಣ ... ೧೧
ಮಹಾದ್ರೋಹಿ ... ೧೯
ಶಿಲಾವಿಗ್ರಹ ... ೨೪
ದಾರಿಯಲ್ಲಿ ಜತೆ ... ೨೭
ಅತ್ರಿ ... ೩೧
ತುಲಸೀ ಜನ್ಮ ವೃತ್ತಾಂತ ... ೩೩
ಪ್ರಹ್ಲಾದ ... ೩೭
ಹಗೆ ... ೩೯
ಅವನೇ ಇವನು ... ೪೪
ತಿರುಗಿ ತಂದ ತಿಮ್ಮ ... ೪೭
ಭೂತವೈದ್ಯ ... ೪೮
ದೇವೀಭಾಗವತ ... ೫೧
ಅಸಲು ತಪ್ಪು ... ೫೯
ಬದಲಾವಣೆ ... ೬೧





ಬಿಡಿ ಪ್ರತಿ ರೂ. ೧-೨೫

ವಾರ್ಷಿಕ ಚಂದಾ ರೂ. ೧೫-೦೦

# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'

ಸಂಚಾಲಕರು : ನಾಗಿರೆಡ್ಡಿ


ಮನಸ್ಸಿನಲ್ಲಿ ಚೆನ್ನಾಗಿ ಅಂಟಿ ಜೀವನಕಾಲದ ಕೊನೆಯವರೆಗೂ ಸಂದರ್ಭಾನುಸಾರವಾಗಿ ಜ್ಞಾಪಕಕ್ಕೆ ಬಂದು, ಉಪಯೋಗ ಬೀಳುವಂತಹವು ಬಾಲ್ಯದಲ್ಲಿ ಕಲಿತ ವಿದ್ಯೆಗಳೇ. ಆಮೇಲೆ ಕಲಿತವುಗಳೆಲ್ಲ ತಾತ್ಕಾಲಿಕವಾದುವುಗಳು: ಸಂಬಂಧ ಬಿಟ್ಟ ಮೇಲೆ ಮರೆತು ಬಿಡುವಂತಹವು. ಗರ್ಭದ ಶಿಶುವಿಗೆ ಅಂಟಿಕೊಂಡ ತತ್ವಗಳು ಮಹಾ ತಪಃಶಕ್ತಿ ಪಡೆದಂಥವನನ್ನೇ ಹತ ಮಾಡುವಷ್ಟು ಶಕ್ತಿವಂತವಾದ ಬಗೆಯನ್ನು ಈ ಸಂಚಿಕೆಯ ಪುರಾಣಬಾಲ "ಪ್ರಹ್ಲಾದ"ನ ಕಥೆ ತಿಳಿಸುತ್ತದೆ.

## ಅಮರವಾಣಿ

ದಾರಿದ್ರ್ಯಸ್ಯ ಪರಾಮೂರ್ತಿಃ ಯಾಚ್ಞಾ ನ ದ್ರವಿಣಾಲ್ಪತಾ
ಜರದ್ಗವಧನಶ್ಶಂಭುಃ ತಥಾಪಿ ಪರಮೇಶ್ವರಃ

ಯಾಚನೆಯ ಪರಿಸ್ಥಿತಿ ದಾರಿದ್ರ್ಯದ ಪರಾಕಾಷ್ಠತೆಯಾಗಲಾರದು. ಶಿವನು ಮುದಿ ಎತ್ತನ್ನಿಟ್ಟುಕೊಂಡವನಾದರೂ ಶಿವನು ಪರಮೇಶ್ವರನೇ. ಅಂದರೆ ಐಶ್ವರ್ಯವಂತನೇ!


ಸಂಪುಟ: ೬೩ ಆಗಸ್ಟ್ '೭೯ ಸಂಚಿಕೆ: ೨

ಬಿಡಿ ಪ್ರತಿ ರೂ. ೧-೨೫ :: ವಾರ್ಷಿಕ ಚಂದಾ ರೂ. ೧೫-೦೦



# ಪ್ರಶ್ನೋತ್ತರಗಳು

**ಟಿ. ಗೋಪೀಕೃಷ್ಣ, ನೆಲ್ಲೂರು (ಆಂಧ್ರ)**

ಪ್ರ : ಭೂಮಿಯ ಭಾರವನ್ನು ಹೇಗೆ ಕಂಡು ಹಿಡಿಯಲಾಯಿತು ?

ಉ : "ಭಾರ" ಎಂಬುದು ಒಂದು ವಸ್ತುವಿನ ಗುರುತ್ವಾಕರ್ಷಣ ಶಕ್ತಿಯಿಂದ ಅಥವಾ ಆ ಶಕ್ತಿಯ ಪ್ರಯೋಗದಿಂದ ಉಂಟಾಗುತ್ತದೆ. ಒಂದೇ ವಸ್ತುವಿನ ಭಾರ ನೆಲದ ಮೇಲೂ, ಎತ್ತರವಾದ ಬೆಟ್ಟದ ಮೇಲೂ, ಭೂಮಧ್ಯ ರೇಖೆಯಲ್ಲಿಯೂ, ಧ್ರುವ ಪ್ರಾಂತದಲ್ಲಿಯೂ ಬೇರೆ ಬೇರೆ ಯಾಗಿರುತ್ತದೆ.

ಇದಲ್ಲದೆ ವಸ್ತುಗಳಿಗೆ "ಸ್ವೇಚ್ಛಾಪತನ" ಎಂಬುದೊಂದಿದೆ. ಅದು ಭಾರರಹಿತ ಸ್ಥಿತಿ. ಕೃತ್ರಿಮ ಉಪಗ್ರಹಗಳಲ್ಲಿ ತಿರುಗುವವರಿಗೆ ಭಾರವಿರುವುದಿಲ್ಲ. ಹಾಗೆಯೇ ಸೂರ್ಯನ ಸುತ್ತಲೂ ಭೂಮಿ ತಿರುಗುವುದು ಅದರ "ಸ್ವೇಚ್ಛಾಪತನ" ಸ್ಥಿತಿಯಾಗಿದೆ. ಭೂಮಿಗೆ ಭಾರವಿಲ್ಲ.

ನೀವು ಚಕ್ರದ ತೊಟ್ಟಿಲಲ್ಲಿ ಏರಿದ್ದೀರಾ ? ಅದರಲ್ಲಿ ನಾವು ಮೇಲೆ ಹೋದಾಗ ನಮ್ಮ ಭಾರವು [ಸ್ವಲ್ಪ ಹೆಚ್ಚುತ್ತದೆ. ಕೆಳಗೆ ಇಳಿಯುವಾಗ ಸ್ವಲ್ಪ ತಗ್ಗುತ್ತದೆ. ಭೂಮಿಗೆ ಗುರುತ್ವಾಕರ್ಷಣ ಶಕ್ತಿ ಇರುವುದರಿಂದ ಅದರ ಮೇಲೆ ಪ್ರತಿ ವಸ್ತುವಿಗೂ ಅಷ್ಟೋ ಇಷ್ಟೋ ಭಾರವುಂಟಾಗುತ್ತದೆ. ಚಂದ್ರಗೋಳದ ಮೇಲೆ ಕೂಡಾ ಗುರುತ್ವಾಕರ್ಷಣ ಶಕ್ತಿಯಿದೆ. ಆದರೆ ಭೂಮಿಗಿರುವುದಕ್ಕಿಂತ ಆರನೇ ಒಂದು ಭಾಗದಷ್ಟೇ ಇದೆ. ಅಂದರೆ ಭೂಮಿಯ ಮೇಲಿಗಿಂತ ಚಂದ್ರನ ಮೇಲೆ ವಸ್ತುಗಳ ಭಾರವು ಆರು ಪಾಲು ಕಡಿಮೆಯಾಗಿರುತ್ತದೆ.

ವಸ್ತುಗಳಲ್ಲಿರುವ "ದ್ರವ್ಯ" ದಿಂದ ಗುರುತ್ವಾಕರ್ಷಣ ಶಕ್ತಿಯುಂಟಾಗುತ್ತದೆ. ಭಾರದಲ್ಲಿ ವ್ಯತ್ಯಾಸವಾದರೂ ದ್ರವ್ಯವು ಯಾವಾಗಲೂ ಒಂದೇ ರೀತಿಯಲ್ಲಿರುತ್ತದೆ. ಭೂಮಿಯಲ್ಲಿಯೂ ಚಂದ್ರನಲ್ಲಿಯೂ ದ್ರವ್ಯವಿದೆಯಷ್ಟೆ ? ಆದುದರಿಂದ ಎರಡೂ ಒಂದನ್ನೊಂದು ಆಕರ್ಷಿಸುತ್ತವೆ. ಆದರೆ ಚಂದ್ರನ ಆಕರ್ಷಣ ಶಕ್ತಿಗಿಂತ ಭೂಮಿಯ ಆಕರ್ಷಣ ಶಕ್ತಿ ಬಹಳ ಹೆಚ್ಚು. ರಾಕೆಟ್ ಸಹಾಯದಿಂದ ಅಂತರಿಕ್ಷಯಾನ ಮಾಡುವವರಿಗೆ ರಾಕೆಟ್ ಉರಿಯುವಷ್ಟು ಕಾಲ ವೇಗ ಹೆಚ್ಚುತ್ತದೆ. ಕೊನೆಯ ರಾಕೆಟ್ ಉರಿದು ತೀರಿದ ಕೂಡಲೇ ಅಂತರಿಕ್ಷ ನೌಕೆ "ಸ್ವೇಚ್ಛಾಪತನ"ಕ್ಕೆ ಗುರಿಯಾಗುತ್ತದೆ. ತಕ್ಕಷ್ಟು ವೇಗವಿದ್ದರೆ ಅದು ಭೂಮಿಯ ಆಕರ್ಷಣ ಪರಿಧಿಯನ್ನು ದಾಟಿ ಚಂದ್ರನ ಆಕರ್ಷಣ ಪರಿಧಿಯೊಳಗೆ ಪ್ರವೇಶಿಸಿ ಮತ್ತೆ ವೇಗ ವೃದ್ಧಿ ಮಾಡಿಕೊಳ್ಳಬಹುದು. ಆಗ ಅಂತರಿಕ್ಷ ಯಾತ್ರಿಕರಿಗೆ ಮತ್ತೆ ಸ್ವಲ್ಪ ಭಾರ ಬರುತ್ತದೆ. ಆದರೆ ಅವರು ಚಂದ್ರನ ಸುತ್ತಲೂ ಕಕ್ಷೆ ಕಟ್ಟಿ ತಿರುಗಲು ಶುರು ಮಾಡಿಬಿಟ್ಟರೆ, ಭಾರವು ಹೋಗಿ ಬಿಡುತ್ತದೆ. ಸೂರ್ಯನ ಸುತ್ತಲೂ ಕಕ್ಷೆಗಳಲ್ಲಿ ತಿರುಗುತ್ತಿರುವ ಯಾವ ಗ್ರಹಕ್ಕೂ ಭಾರವಿರುವುದಿಲ್ಲ. ಆಕರ್ಷಣ ಶಕ್ತಿಯ ಒಂದು ಅಂಶವೇ ನಮಗೆ "ಭಾರ"ವೆಂಬ ಭಾವನೆ ಬರಿಸುತ್ತದೆ. ಎಲ್ಲಾ ಗ್ರಹಗಳೂ ಪರಸ್ಪರ ಆಕರ್ಷಣ ಶಕ್ತಿಯಲ್ಲಿಯೇ ಗಗನಾಂತರದಲ್ಲಿ ಭ್ರಮಣ ಮಾಡುತ್ತವೆ.



೭೩

ಆ ಮಿತ್ರ ಚತುಷ್ಟಯರು ಹೇಳಿದ ಮಾತನ್ನು ಕೇಳಿ ಭೈರವಾನಂದನು ಬಹಳ ಸಂತೋಷಪಟ್ಟು, ಆ ನಾಲ್ವರಿಗೂ ನಾಲ್ಕು ಮಂತ್ರದ ಬತ್ತಿಗಳನ್ನು ತಯಾರಿಸಿಕೊಟ್ಟು, "ಇದನ್ನು ಹಿಡಿದುಕೊಂಡು ಹಿಮಾಲಯ ಪರ್ವತಕ್ಕೆ ಹೋಗಿರಿ. ಅಲ್ಲಿ ನಡೆಯುವಾಗ ಯಾವ ಸ್ಥಳದಲ್ಲಿ ಈ ಬತ್ತಿಗೆ ಬೆಂಕಿ ಹಿಡಿದು ಸುಟ್ಟು ಕೆಳಗೆಬೀಳುವುದೋ ಆ ಸ್ಥಳದಲ್ಲಿ ನಿಧಿ ಇರುತ್ತದೆ. ಅದನ್ನು ಅಗೆದು ತೆಗೆದುಕೊಳ್ಳಿ. ಆದರೆ ಪ್ರಕೃತಿ ನಿಯಮಗಳನ್ನು ಉಲ್ಲಂಘಿಸಬಾರದು. ನಿಮ್ಮ ದಾರಿದ್ರ್ಯ ತೀರುವಷ್ಟು ಧನವು ಸಿಕ್ಕಿದ ಮೇಲೆ, ಅದನ್ನು ಹೊತ್ತುಕೊಂಡು ಹಿಂದಿರುಗಿ ಹೋಗಿಬಿಡಿ" ಎಂದನು.

ನಾಲ್ವರೂ ಬಹಳ ಸಂತೋಷದಿಂದ ಭೈರವಾನಂದನಿಗೆ ಕೃತಜ್ಞತೆ ಹೇಳಿ ಸಾಷ್ಟಾಂಗ ಪ್ರಣಾಮ ಮಾಡಿ ಹಿಮಾಲಯ ಪ್ರಾಂತಕ್ಕೆ ಹೊರಟುಹೋದರು. ಅವರು ಹಿಮಾಲಯದ ಮೊದಲನೇ ಗುಡ್ಡವನ್ನು ಹತ್ತುವಾಗ ಅಲ್ಪ ಲೋಭಿಯ ಬತ್ತಿ ಭಗ್ಗನೆ ಉರಿದು ಕೆಳಗೆ ಉದುರಿಬಿತ್ತು.

ಅವನು ಅಲ್ಲಿ ಅಗೆದಾಗ ತಾಮ್ರದ ನಾಣ್ಯಗಳು ತುಂಬಿದ ನಿಧಿ ಬೇಕಾದಷ್ಟು ಅಲ್ಲಿರುವುದು ಕಂಡಿತು. ಅದನ್ನು ನೋಡಿ ಅವನು ಬಹಳ ಸಂತೋಷದಿಂದ ಉಳಿದವರೊಂದಿಗೆ, "ನಾವು ಹೊರಲಿಕ್ಕೆ ಸಾಧ್ಯವಾದಷ್ಟು ನಾಣ್ಯಗಳನ್ನು ತೆಗೆದುಕೊಂಡು ಮನೆಗೆ ಹೋಗಿಬಿಡೋಣ. ಶ್ರೀಮಂತರಾಗಲು ಈ ತಾಮ್ರದ ನಿಧಿಯೇ ಸಾಕು. ಇದರಿಂದ ಸೌಕರ್ಯವಾಗಿ ಬದುಕಬಹುದು." ಎಂದನು.

"ಎಲೋ! ಹುಚ್ಚ! ಈ ಕೆಲಸಕ್ಕೆ ಬಾರದ ತಾಮ್ರದ ನಾಣ್ಯಗಳಿಂದ ನಮ್ಮ ದಾರಿದ್ರ್ಯ ತೀರುವುದುಂಟೆ? ಮುಂದೆ ಹೋದರೆ ಹೆಚ್ಚಿನದೇನಾದರೂ ಸಿಕ್ಕುತ್ತದೆ" ಎಂದರು ಉಳಿದ ಮೂವರು.

"ನೀವು ಹೋಗಿ, ನನಗೆ ಇದೇ ಸಾಕು. ನಾನು ನಿಮ್ಮೊಂದಿಗೆ ಇನ್ನು ಬರಲಾರೆ" ಎಂದು ಹೇಳಿ ಅಲ್ಪ ಲೋಭಿ ಮೂರು ಸಾವಿರ ತಾಮ್ರದ ನಾಣ್ಯಗಳನ್ನು ತೆಗೆದು ಮೂಟೆ ಕಟ್ಟಿಕೊಂಡು ಮನೆಯ ದಾರಿ ಹಿಡಿದನು.



ಮಾರನೇ ದಿನ ಮಿತ ಲೋಭಿಯ ಬತ್ತಿ ಉರಿದು ನೆಲಕ್ಕೆ ಉದುರಿಬಿತ್ತು. ಅವನು ಅಲ್ಲಿ ಅಗೆದು ನೋಡಲು, ಅಲ್ಲಿ ಬೆಳ್ಳಿ ನಾಣ್ಯಗಳ ನಿಕ್ಷೇಪವು ಅಪಾರ ವಾಗಿರುವುದು ಕಂಡುಬಂದಿತು. ಅದನ್ನು ನೋಡಿ ಅವನು ಅತ್ಯಾನಂದದಿಂದ, "ನಾವು ಹೊರಲು ಸಾಧ್ಯವಾದಷ್ಟು ಈ ಹಣವನ್ನು ಕಟ್ಟಿಕೊಂಡು ಹೋಗೋಣ, ಬನ್ನಿ. ಇನ್ನು ಮೇಲೆ ಕಷ್ಟಪಟ್ಟು ಮುಂದೆ ಹೋಗುವ ಅಗತ್ಯವಿಲ್ಲ" ಎಂದು ಕೂಗಿ ಹೇಳಿದನು.

ಅದಕ್ಕೆ ಉಳಿದಿಬ್ಬರೂ, "ಮೊದಲು ತಾಮ್ರದ ನಾಣ್ಯ ಸಿಕ್ಕಿತು. ಈಗ ಬೆಳ್ಳಿಯ ನಾಣ್ಯ. ಮುಂದೆ ಹೋದರೆ ಖಂಡಿತಾ ಬಂಗಾರದ ನಾಣ್ಯಗಳ ನಿಕ್ಷೇಪವೇ ಸಿಗುತ್ತೆ. ಆದ್ದರಿಂದ ನಾವು ಮುಂದಕ್ಕೆ ಹೋಗಲೇ ಬೇಕು" ಎಂದರು.

"ನನಗೆ ಈ ಬೆಳ್ಳಿಯೇ ಸಾಕಪ್ಪ. ನಾನು ಮುಂದಕ್ಕೆ ಬರಲಾರೆ. ಇದನ್ನೇ ತೆಗೆದುಕೊಂಡು ಹೋಗಿ ಸುಖಿ ವಾಗಿರುತ್ತೇನೆ" ಎಂದು ಹೇಳಿ ಮಿತಲೋಭಿ ಬೆಳ್ಳಿ ನಾಣ್ಯಗಳನ್ನು ಮೂಟೆಕಟ್ಟಿಕೊಂಡು ಮನೆಯ ದಾರಿ ಹಿಡಿದನು.

ಉಳಿದಿಬ್ಬರೂ ಮುಂದೆ ಸಾಗಿದರು. ಮರು ದಿನ ಅತಿಲೋಭಿಯ ಕೈಯಲ್ಲಿದ್ದ ಬತ್ತಿ ಉರಿದು ಕೆಳಗೆ ಉದುರಿತು. ಅಲ್ಲಿ ಅಗೆದು ನೋಡಿದಾಗ ಬಂಗಾರದ ನಾಣ್ಯಗಳ ಭಾರಿ ದೊಡ್ಡ ನಿಧಿಯಿರುವುದು ಕಂಡುಬಂತು.

"ನಾವು ಇವುಗಳನ್ನು ಹೊರಲು ಸಾಧ್ಯವಾಗುವಷ್ಟು ಕಟ್ಟಿಕೊಂಡು ಹೋಗಿಬಿಡೋಣ. ಇನ್ನು ಮುಂದೆ ಹೋಗುವ ಅಗತ್ಯವಿಲ್ಲ" ಎಂದನು ಮೂರನೆಯ ಅತಿಲೋಭಿ, ಪರಮ ಸಂತೋಷದಿಂದ.

ಆ ಮಾತಿಗೆ ಅತ್ಯಂತ ಲೋಭಿ, "ಎಲೋ ಮೂಢನೇ! ನಿನಗೆ ಇಷ್ಟೂ ಗೊತ್ತಾಗುವುದಿಲ್ಲವೇ? ಮೊದಲು ತಾಮ್ರ, ಆ ಮೇಲೆ ಬೆಳ್ಳಿ, ಮತ್ತೀಗ ಬಂಗಾರ! ಇನ್ನು ಮುಂದೆ ಸಿಗುವಂಥಾ ನಿಧಿಯಲ್ಲಿ ಬೆಲೆ ಬಾಳುವ ವಜ್ರ ವೈಢೂರ್ಯ ಮೊದಲಾದ ನವರತ್ನಗಳೇ ಇರುತ್ತವೆ. ಅಂಥವುಗಳಲ್ಲಿ ಒಂದೇ ಒಂದು ಸಿಕ್ಕಿದರೂ ಸಾಕು, ಜೀವಿತಾಂತ್ಯದವರೆಗೂ ದಾರಿದ್ರ್ಯವಿಲ್ಲದಂತೆ ಬದುಕಲು! ಹಾಗಿರುವಾಗ ಹೊರಲು ಸಾಧ್ಯವಾದಷ್ಟು ರತ್ನಗಳನ್ನು ಒಯ್ದೆವೆಂದರೆ ರಾಜ್ಯಕ್ಕೆ ರಾಜ್ಯವನ್ನೇ ಕೊಂಡುಕೊಂಡು ಬಿಡಬಹುದು. ನೀನು ಹೊರುವಷ್ಟು ಬಂಗಾರದ ಮೂಟೆ ಒಂದು ವಜ್ರದ ಬೆಲೆಗೆ ಸಮವಾಗಲಾರದು ಗೊತ್ತಾ? ಈ ಅಲ್ಪ ಬಂಗಾರವನ್ನು ಹೊತ್ತುಕೊಂಡು ಹೋಗದಿದ್ದರೇನು, ಬಿಟ್ಟರೇನು? ನಾನಂತೂ ಮುಂದೆ ಹೋಗುವನೇ! ಇಷ್ಟವಿದ್ದರೆ ನೀನೂ ಬಾ" ಎಂದನು.

ಅದಕ್ಕೆ ಅತಿಲೋಭಿ, "ಮಿತ್ರನೇ, ನನಗೆ ಬಂಗಾರವೇ ಸಾಕು. ನಾವು ಹೊರಟದ್ದು ದಾರಿದ್ರ್ಯದಿಂದ ವಿಮುಕ್ತಿ ಪಡೆಯಬೇಕು ಅಂತ. ಅಷ್ಟೇ

ಹೊರತು ರಾಜ್ಯಗಳನ್ನು ಕೊಂಡುಕೊಳ್ಳಲಿಕ್ಕೆ ಅಲ್ಲ. ನಾವು ನಮ್ಮ ಜನ್ಮದಲ್ಲಿ ಮುಟ್ಟಿ ಕೂಡಾ ಅರಿಯದ ಬಂಗಾರವನ್ನು ಅಲ್ಪ ಬಂಗಾರ ಅನ್ನುವೆಯಲ್ಲಾ ? ನನ್ನ ಮಟ್ಟಿಗೆ ಇದು ಎಷ್ಟೋ ಬೆಲೆಬಾಳುವಂಥಾ ನಿಧಿಯೇ. ಇದರಿಂದ ನಾನು ಜೀವನ ಪರ್ಯಂತ ಧನವಂತನಾಗಿದ್ದು ದಾರಿದ್ರ್ಯವನ್ನು ಜಯಿಸಬಲ್ಲೆ. ಇದಕ್ಕಿಂತ ಹೆಚ್ಚು ನನಗೇನೂ ಬೇಡ. ಅತ್ಯಾಶೆ ನನಗಿಲ್ಲಪ್ಪ" ಎಂದನು.

ಅದಕ್ಕೆ ಅತ್ಯಂತ ಲೋಭಿ, "ಅದಕ್ಕೇ ನಿನ್ನನ್ನು ಮೂಢಾ ಅಂದೆನು, ಆಶೆಯಿರುವಷ್ಟೂ ಆರ್ಜನ ಬುದ್ಧಿಯೂ ಇರುತ್ತೆ. ಈ ಮಾತನ್ನು ನಾನು ನಿರೂಪಿಸಿ ತೋರಿಸುತ್ತೇನೆ. ಈ ಹಾಳು ಬಂಗಾರ ಇಲ್ಲೇ ಬಿಟ್ಟು ನನ್ನ ಜತೆ ಬಾ" ಎಂದನು,

"ನಾನು ಮುಂದೆ ಬರುವವನಲ್ಲ. ನನಗೆ ಇದು ಯಥೇಷ್ಟ ಸಾಕು. ಆದರೂ ನಾನು ನಿನಗಾಗಿ ಇಲ್ಲಿಯೇ ಕಾದುಕೊಂಡಿರುತ್ತೇನೆ. ಇಬ್ಬರೂ ಕೂಡಿಯೇ ಹಿಂದಿರುಗೋಣ. ಬೇಗ ಬಂದುಬಿಡು," ಎಂದನು ಅತಿ ಲೋಭಿ.

ಅತ್ಯಂತ ಲೋಭಿ ಒಬ್ಬಂಟಿಗನಾಗಿ ಮುಂದಕ್ಕೆ ಸಾಗಿದನು. ಮುಂದೆ ಮುಂದೆ ಬೆಟ್ಟಗಳು ಬಹಳ ಮೊರಟಾಗಿ ಕಡಿದಾಗಿ ನಡೆಯಲು ದುಸ್ಸಹವಾಗಿದ್ದುವು. ಮೂರು ದಿನ ನಡೆದರೂ ಅವನ ಬತ್ತಿಗೆ ಬೆಂಕಿ ಹಿಡಿಯಲಿಲ್ಲ. ಅವನು ಒಂದು ಕಣಿವೆಯನ್ನು ಪ್ರವೇಶಿಸಿದನು. ಅದು ನಿರ್ಜನವಾಗಿಯೂ ನಿರ್ಜಲವಾಗಿಯೂ ಕಾಣುತಿತ್ತು. ನೆತ್ತಿಯ ಮೇಲೆ ಉರಿ ಬಿಸಿಲು ! ಎಲ್ಲಿಯೂ ಒಂದು ಚುಕ್ಕೆ ನೀರೂ ಇರಲಿಲ್ಲ. ಒಂದೇ ಒಂದು ಪ್ರಾಣಿಯೂ ಕಾಣಲಿಲ್ಲ. ಸರಿಯಾದ ದಾರಿಯೂ ಮಾಯವಾಗಿತ್ತು. ಒಂದು ಹುಳು ಕೂಡಾ ಇಲ್ಲದ ಅಡ್ಡಾದಿಡ್ಡವಾದ ದಾರಿಯಲ್ಲಿ ಮುಳ್ಳಿನ ಗಿಡಗಳು ಬೆಳೆದಿದ್ದುವು. ಆದರೂ ಅವನು ಆಶೆಯ ಪ್ರೇರೇಪಣೆಯಿಂದ ಬತ್ತಿ ಉರಿಯುವುದನ್ನೇ



ಇದಿರುನೋಡುತ್ತ, ಮುಂದೆ ಮುಂದೆ ನಡೆದನೇ ಹೊರತು ಅತಿ ಲೋಭಿಯ ಬಳಿಗೆ ಹಿಂದಿರುಗುವ ಆಲೋಚನೆ ಮಾಡಲಿಲ್ಲ. ಬಂಗಾರದಿಂದ ತೃಪ್ತಿಯಾಗೋಣ ಎಂಬ ಆಲೋಚನೆ ಅವನಿಗೆ ಬರಲೇ ಇಲ್ಲ.

ಹೋದ ಹೋದಂತೆ ಒಂದು ತಗ್ಗು ಪ್ರದೇಶವು ಬಂದಿತು. ಅದರ ಸುತ್ತಲೂ ಗುಡ್ಡಗಳು ಮುತ್ತಿಕೊಂಡಿದ್ದುವು. ಅಲ್ಲಿ ಒಬ್ಬ ಮನುಷ್ಯನು ನಿಂತಿದ್ದ ! ಅವನ ತಲೆಯ ಮೇಲೆ ಒಂದು ಚಕ್ರವು ತಿರುಗುತ್ತ ಅವನ ರಕ್ತವನ್ನು ಕಡೆಯುತ್ತಿದ್ದಿತು. ಅವನ ಮುಖದಿಂದ ರಕ್ತದ ಧಾರೆಗಳಿಳಿದು ಶರೀರವನ್ನು ನೆನೆಸುತ್ತ ನೆಲದಲ್ಲಿ ಇಂಗುತಿತ್ತು.

ಅತ್ಯಂತ ಲೋಭಿ ಆ ಮನುಷ್ಯನ ಬಳಿಗೆ ಹೋಗಿ, "ಯಾರಯ್ಯಾ ನೀನು ? ಇಲ್ಲಿ ನಿಂತು ತಲೆಯ ಮೇಲೆ ಚಕ್ರವನ್ನು ತಿರುಗಿಸಿಕೊಂಡಿರುವೆಯೇಕೆ ? ರತ್ನಗಳನ್ನು ಕಂಡು ಹಿಡಿಯಲು ಇದೊಂದು ಯಜ್ಞವೇ, ಅಲ್ಲ ತಪಸ್ಸೇ ? ಇಲ್ಲೆಲ್ಲಿಯಾದರೂ ನೀರಿದೆಯಾ ?" ಎಂದು

ಕೇಳಿದನು. ಅವನು ಬಾಯಿ ಮುಚ್ಚಿದ ಮರುಕ್ಷಣದಲ್ಲಿ ಆ ಮನುಷ್ಯನ ತಲೆಯ ಮೇಲಿದ್ದ ಚಕ್ರವು ರೊಂಯ್ಯನೆ ಹಾರಿಬಂದು ಅತ್ಯಂತ ಲೋಭಿಯ ತಲೆಯ ಮೇಲೆ ನಿಂತು ತಿರುಗ ತೊಡಗಿತು. ಅವನು ಗಾಬರಿಯಾಗಿ, "ಮಿತ್ರಾ, ಇದೇನಿದೇನು ? ಅಯ್ಯೋ ! ನೋವು ! ನೋವು !" ಎಂದು ಕೂಗಿಕೊಂಡನು.

ಅದಕ್ಕೆ ಎರಡನೆಯವನು, "ಈಗ ಆ ಚಕ್ರವು ನಿನ್ನ ನೆತ್ತೀ ಮೇಲೆ ಹಾರಿದ ಹಾಗೆಯೇ ನನ್ನ ತಲೇ ಮೇಲೆ ಹಾರಿ ಇಷ್ಟು ಕಾಲದಿಂದ ಯಾತನೆ ಕೊಡುತಿತ್ತು. ಪುಣ್ಯಾತ್ಮ. ನೀನು ಬಂದೆ, ನನ್ನನ್ನು ಬಿಟ್ಟಿತು" ಎಂದನು,

"ಹಾಗಾದರೆ ಇದು ನನ್ನನ್ನು ಯಾವಾಗಬಿಡುತ್ತೆ ? ನೆತ್ತಿಯ ಮೇಲೆ ನಿಲ್ಲದೆಯೇ ಗಿರಿಗಿರಿ ತಿರುಗುತ್ತ ರಕ್ತವನ್ನೇ ಕಡೆಯುತ್ತದಲ್ಲಾ !" ಎಂದು ಗೋಳಾಡಿದ ಅತ್ಯಂತ ಲೋಭಿ.

"ನಿನ್ನ ಹಾಗೆ ಯಾವನಾದರೂ ಒಂದು ಮಂತ್ರದ ಬತ್ತಿ ಹಿಡಿದುಕೊಂಡವನು ಬಂದು ನಿನ್ನನ್ನು ಮಾತಾಡಿಸಿದಾಗ ಈ ಚಕ್ರ ನಿನ್ನ ನೆತ್ತಿಯಿಂದ ಅವನ ನೆತ್ತಿಗೆ ಹಾರಿ ಬಿಡುತ್ತದೆ" ಎಂದ ಆ ಮನುಷ್ಯ.

"ನೀನು ಇದನ್ನು ತಲೆಯಲ್ಲಿ ಧರಿಸಿ ಎಷ್ಟು ಕಾಲವಾಯಿತು ?" ಎಂದು ಅತ್ಯಂತ ಲೋಭಿ ಆ ಮನುಷ್ಯನನ್ನು ಕೇಳಿದ.

"ಈಗ ರಾಜನು ಯಾರು ?" ಎಂದು ಪ್ರಶ್ನಿಸಿದ ಆ ಮನುಷ್ಯ, "ಈಗ ರಾಜನಾಗಿರುವುದು ವೀಣಾ ವತ್ಸ ರಾಜ ಉದಯನ" ಎಂದನು ಅತ್ಯಂತ ಲೋಭಿ,

"ನಾನು ಎಷ್ಟು ಕಾಲದಿಂದ ಇಲ್ಲಿ ಚಕ್ರ ಹೊತ್ತು ನಿಂತಿದ್ದೆನೋ ಹೇಳಲು ಸಾಧ್ಯವಿಲ್ಲ. ಈ ರಾಜನಾರೋ ನಾನರಿಯೆ. ರಾಮನು ರಾಜನಾಗಿರುವಾಗ, ನಾನು ದಾರಿದ್ರ್ಯದ ಬಾಧೆಯನ್ನು ತಾಳಲಾಗದೆ ನಿನ್ನ ಹಾಗೆಯೇ ಒಂದು ಮಂತ್ರದ ಬತ್ತಿಯನ್ನು ಹಿಡಿದುಕೊಂಡು ಇಲ್ಲಿಗೆ ಬಂದೆ, ನಾನು ಜೀವಿತಾಂತ್ಯದವರೆಗೂ ಸುಖವಾಗಿರಲು ಸಾಕಾಗುವಷ್ಟು ಧನದಲ್ಲಿ ತೃಪ್ತಿ ಪಡದೆ ನನ್ನ ಮಿತ್ರರ ಮಾತು ಕೇಳದೆ ಮುಂದಕ್ಕೆ ಬಂದು ಇಲ್ಲಿ ಒಬ್ಬ ಮನುಷ್ಯನನ್ನು ನೋಡಿದೆ. ಅವನ ತಲೆಯ ಮೇಲೆ ಈ ಚಕ್ರವು ಸುತ್ತಿಕೊಂಡಿತ್ತು. ನಾನು ಅವನನ್ನು ಇಲ್ಲೇಕೆ ಹೀಗಿರುವಿ ? ಇಲ್ಲೆಲ್ಲಿಯಾದರೂ ನೀರಿದೆಯೋ ಎಂದು ಕೇಳಿದೆ. ಮರುಕ್ಷಣದಲ್ಲಿ ಆ ಚಕ್ರವು ನನ್ನ ತಲೇ ಮೇಲೆ ಹಾರಿ ಬಂದು ತಿರುಗಿತು. ಎಷ್ಟೋ ಯುಗಗಳಿಂದ ನಾನು ಇಲ್ಲಿ ಹೀಗೆ ನಿಂತಿದ್ದೇನೆ. ಕಾರಣಾವೇನಂದರೆ ಈ ಸ್ಥಳಕ್ಕೆ ಯಾರೂ ಬರುವುದಿಲ್ಲ. ದೇವರ ದಯದಿಂದ ಮಂತ್ರದ ಬತ್ತಿ ಹಿಡಿದುಕೊಂಡು ನೀನು ಬಂದೆ. ನನಗೆ ಬಿಡುಗಡೆ ಕೊಟ್ಟೆ." ಎಂದ ಆ ಮನುಷ್ಯ,





# ಮಹಾದ್ರೋಹಿ

ಅಮಾನುಷ ಶಕ್ತಿಯನ್ನು ಹೊತ್ತು ಹೊತ್ತು ತಾನೂ ಅಮಾನುಷತ್ವದ ಮಹತ್ತಿಗೇರಿದ ರಾಜಾ ತ್ರಿವಿಕ್ರಮನು, ಮತ್ತೆ ಮರದ ಬಳಿಗೆ ಹಿಂದಿರುಗಿ ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ ಹೆಗಲಿಗೇರಿಸಿಕೊಂಡು ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದೊಳಗಿನ ಬೇತಾಳವು ಮಾತಾಡಲು ತೊಡಗಿ, "ಎಲೋ ಮಹಾರಾಜನೇ, ಈ ಪ್ರಪಂಚದಲ್ಲಿ ವಿಶ್ವಾಸ ವಿನಯ ವಿಧೇಯತೆಗಳುಳ್ಳವರಿಗೆ ಸ್ಥಾನವಿಲ್ಲ. ಅಂಥವರು ಪರಮ ದ್ರೋಹಿಗಳೆಂದೇ ಪರಿಗಣಿಸಲ್ಪಡುತ್ತಾರೆ. ಇದಕ್ಕೆ ನಿದರ್ಶನವಾಗಿ ರವೀಂದ್ರನೆಂಬವನ ಕಥೆ ಹೇಳುತ್ತೇನೆ. ದಾರಿಯ ಶ್ರಮ ತಿಳಿಯದಂತೆ ಕೇಳುತ್ತಾ ನಡೆ" ಎಂದು ಹೀಗೆ ಕಥೆಯನ್ನು ಪ್ರಾರಂಭಿಸಿತು :

ಒಂದು ಊರಿನಲ್ಲಿ ಪದ್ಮನಾಭ ಮತ್ತು ವಾಸುದೇವ ಎಂಬವರು ಸ್ನೇಹಿತರಾಗಿದ್ದರು. ಇಬ್ಬರ ವಯಸ್ಸೂ ಒಂದೇ. ಆದುದರಿಂದ ಸ್ನೇಹಕ್ಕೆ ಒಳ್ಳೆಯ ಜೋಡಿಯಾಗಿತ್ತು.

ಅವರಿಬ್ಬರೂ ತಮ್ಮ ಮದುವೆಯನ್ನು ಕೂಡಾ ಒಟ್ಟಿಗೇ ಮಾಡಿಕೊಂಡರು. ಹಾಗೆ ಹೆಂಡತಿಯೊಂದಿಗೆ

## ಬೇತಾಳಕಥೆಗಳು?...

ಗೃಹಸ್ಥರಾದ ಮೇಲೆ ವಾಸುದೇವನಿಗೆ ಕೆಟ್ಟ ಗ್ರಹದ ದೃಷ್ಟಿ ಬೀಳತೊಡಗಿತು. ಅವನ ಹೆಂಡತಿ ರವೀಂದ್ರನೆಂಬ ಮಗನಿಗೆ ತಾಯಿಯಾಗಿ ತೀರಿ ಹೋದಳು. ದಾಯಾದಿಗಳು ವಾಸುದೇವನ ಆಸ್ತಿ ಪಾಸ್ತಿಗಳನ್ನು ವಶಪಡಿಸಿಕೊಂಡು ಅವನನ್ನು ಬಿಕಾರಿಯನ್ನಾಗಿ ಮಾಡಿದರು. ಅವನು ಪೂರ್ತಿ ಪದ್ಮನಾಭನ ಆಶ್ರಯದಲ್ಲಿರುತ್ತ, ಕಾಯಿಲೆ ಬಿದ್ದು, ಸಾಯುವ ಸ್ಥಿತಿಗೆ ಬಂದನು. ಸಾಯುವ ಮೊದಲು ತನ್ನ ಮಗ ರವೀಂದ್ರನನ್ನು ಪದ್ಮನಾಭನಿಗೇ ಒಪ್ಪಿಸಿ ಕೊಟ್ಟು, ಅವನ ಯೋಗಕ್ಷೇಮವನ್ನು ನೋಡಿಕೊಳ್ಳುವಂತೆ ಹೇಳಿ ಭರವಸೆ ಪಡೆದು ಕಣ್ಣು ಮುಚ್ಚಿದನು.

ಪದ್ಮನಾಭನು ತನ್ನ ಸ್ನೇಹಿತನಿಗೆ ಕೊಟ್ಟ ಮಾತನ್ನು ಅಕ್ಷರಶಃ ಪಾಲಿಸಿಕೊಂಡಿದ್ದನು. ರವೀಂದ್ರನನ್ನು ತನ್ನ ಮಗನಾದ ಶೇಖರನಿಗೆ ಸಮಾನನಾಗಿ ನೋಡುತ್ತ ಬೆಳೆಸಿದನು. ಶೇಖರನೂ, ರವೀಂದ್ರನೂ ಒಂದೇ ತಾಯಿಯ ಮಕ್ಕಳಂತೆ ಬೆಳೆಯುತ್ತ ತಮ್ಮ ಗ್ರಾಮದಲ್ಲಿಯ ಓದನ್ನು ಮುಗಿಸಿದರು.

ತರುವಾಯ ಪದ್ಮನಾಭನು ಅವರಿಬ್ಬರನ್ನೂ ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ರಾಜಧಾನಿಗೆ ಕಳುಹಿಸಿ, ಅವರಿಬ್ಬರ ಖರ್ಚಿಗೆ ಬೇಕಾದಷ್ಟು ಹಣವನ್ನು ತನ್ನ ಮಗನಾದ ಶೇಖರನ ಕೈಗೆ ಕೊಡುತ್ತಾ ಇದ್ದನು. ಆದುದರಿಂದ ರವೀಂದ್ರನ ಖರ್ಚಿಗೆ ಬೇಕಾದ ಹಾಗೆ ಶೇಖರನೇ ಕೊಡಬೇಕಾಗಿತ್ತು.

ಹೀಗೆ ಊರು ಮನೆಯ ವಾತಾವರಣದಿಂದ ಹೊರಬಿದ್ದು ನಗರವನ್ನು ಸೇರಿದ ಮೇಲೆ ಶೇಖರನ ಸ್ವಭಾವವು ಬದಲಾಗತೊಡಗಿತು. ಊರಲ್ಲಿರುವಾಗ ತಂದೆಯ ಭಯದಿಂದ ಅವನ ನಿಜರೂಪ ಬಯಲಾಗಿರಲಿಲ್ಲ. ನಗರದಲ್ಲಿ ಸ್ವಾತಂತ್ರ್ಯ ಬರೆದಂತಾಗಿ ಅವನಿಗೆ ಓದಿನ ಮೇಲೆ ಶ್ರದ್ಧೆ ತಗ್ಗಿ ಆಟ, ಪಾಟ, ವಿನೋದಗಳ ಮೇಲೆಯೂ ವಿಲಾಸ ಜೀವನದಲ್ಲಿಯೂ ಮೋಜುಂಟಾಯಿತು. ಬರಬರುತ್ತ ಆ ಮೋಜು ಹೆಚ್ಚಿನ ಚಟಕ್ಕೆ ಬಿದ್ದಿತು. ಅವನು ತಂದೆ ಕಳುಹಿಸಿ ಕೊಡುವ ಹಣದ ಬಹು ಭಾಗವನ್ನು ಕುಡಿತ, ಜೂಜು, ಜುಗಾರಿಗಳಿಗೆ ವೆಚ್ಚಿಸತೊಡಗಿದನು.



ರವೀಂದ್ರನು ಮಾತ್ರ ಓದಿನ ಮೇಲೆಯೇ ಶ್ರದ್ಧೆಯಿಟ್ಟು ಶೇಖರನನ್ನು ತಿದ್ದಲು ನೋಡಿದನು. ಅದರಿಂದ ಪ್ರಯೋಜನವೇನೂ ಆಗಲಿಲ್ಲ. ಶೇಖರನ ಅಡ್ಡಾದಿಡ್ಡಿ ಪ್ರವರ್ತನೆಗಳನ್ನು ಕುರಿತು ತಂದೆಗೆ ತಿಳಿಸಬೇಕೆಂದು ರವೀಂದ್ರನು ಅನೇಕಬಾರಿ ಯೋಚಿಸಿದನು. ಹಾಗೆ ಮಾಡಿದರೆ ಶೇಖರನು ತನ್ನ ಮೇಲೆ ಕೋಪಿಸಿ, ಈಗ ತನಗೆ ಮಾಡುವ ಧನ ಸಹಾಯವನ್ನು ನಿಲ್ಲಿಸಿಬಿಡುತ್ತಾನೆಂದು ಅವನಿಗೆ ಭಯವಾಯಿತು. ಹಾಗಾದರೆ ತನ್ನದು ಅಧೋಗತಿಯಾದೀತಲ್ಲ !

ಒಂದು ಸಾರಿ ರಜೆಗೆ ಶೇಖರನೂ ರವೀಂದ್ರನೂ ತಮ್ಮ ಊರಿಗೆ ಬಂದಿದ್ದರು. ಅವರ ಓದು ಹೇಗೆ ನಡೆಯುತ್ತದೆಂದು ಪದ್ಮನಾಭನು ವಿಚಾರಿಸಲು ಶೇಖರನು ತಮ್ಮಿಬ್ಬರ ಓದು ಚೆನ್ನಾಗಿಯೇ ನಡೆಯುತ್ತದೆಂದು ತಂದೆಗೆ ಏನೂ ಸಂದೇಹಬಾರದಂತೆ ಉತ್ತರ ಕೊಟ್ಟನು. ಆಗಲಾದರೂ ರವೀಂದ್ರನು ಶೇಖರನ ಗುಣದಲ್ಲಿ ಆದ ಬದಲಾವಣೆಯನ್ನು ಪದ್ಮನಾಭನಿಗೆ ತಿಳಿಸುವ ಗೋಜಿಗೆ ಹೋಗದೆ ಸುಮ್ಮನಿದ್ದುಬಿಟ್ಟನು. ಅಂತೆಯೇ ಪದ್ಮನಾಭನು ಇಬ್ಬರ ವಿಷಯದಲ್ಲಿಯೂ ತೃಪ್ತನಾದನು.

ರಜೆಯ ಕಾಲ ಮುಗಿದ ಮೇಲೆ ಹುಡುಗರಿಬ್ಬರೂ ನಗರಕ್ಕೆ ಹೊರಡುವ ಮುಂಚಿನ ದಿನ ಪದ್ಮನಾಭನ ಪೆಟ್ಟಿಗೆಯಲ್ಲಿದ್ದ ಹಣವು ಕಾಣದೆಹೋಯಿತು. ಪದ್ಮನಾಭನು ಎಲ್ಲರನ್ನೂ ಕರೆದು ವಿಚಾರಿಸಿದನು. ಆಗ ಶೇಖರನು "ನನಗೆ ಗೊತ್ತಿಲ್ಲವಪ್ಪಾ, ರವೀಂದ್ರನೇನಾದರೂ ತೆಗೆದನೋ ಏನೋ ? ನನಗೇನು ಗೊತ್ತು ? " ಎಂದನು.

ಪದ್ಮನಾಭನಿಗೆ ರವೀಂದ್ರನನ್ನು ಶಂಕಿಸುವುದು ಒಳ್ಳೆಯದಲ್ಲವೆನಿಸಿತು. ಆ ಹುಡುಗನು ಮಗನಿಗಿಂತ ಹೆಚ್ಚಿನ ವಿಶ್ವಾಸದಲ್ಲಿರುವವನು. ಆದರೂ ಪದ್ಮನಾಭನು ರವೀಂದ್ರನನ್ನೂ ಕೇಳಿ ನೋಡಿದನು. ಆಗ ರವೀಂದ್ರನು ತುಂಬಾ ಬೆರಗಾಗಿ ಹೋದನು. ಏಕೆಂದರೆ ಆ ಹಣವನ್ನು ಶೇಖರನೇ ತೆಗೆದವನೆಂದು ರವೀಂದ್ರನಿಗೆ ಗೊತ್ತಿತ್ತು. ಶೇಖರನು ತಂದೆಯ ಪೆಟ್ಟಿಗೆಯಿಂದ ಹಣ ಎತ್ತಿಕೊಂಡುದು ಮಾತ್ರವಲ್ಲದೆ,





ತಂದೆಯ ಇದಿರಿನಲ್ಲಿ ರವೀಂದ್ರನನ್ನು ನೋಡಿ, "ಕೇಳದೆ ಯಾಕೋ ತೆಗೆದಿ? ಕೇಳಿದ್ದರೆ ಅಪ್ಪ ಕೊಡದಿರುತ್ತಿದ್ದರೆ? ಕಳ್ಳತನವೇಕೆ?" ಎಂದು ಕೂಡಾ ಕೇಳಿಬಿಟ್ಟನು. ಅದು ಅವನನ್ನು ಸ್ತಬ್ಧಗೊಳಿಸಿತು.

ಶೇಖರನು ತಂದೆಯನ್ನು ಕೇಳದೆಯೇ ಹಣ ತೆಗೆದಿದ್ದಾನೆ. ತಾನು ನಿಜವನ್ನು ಹೇಳಿದರೆ ಶೇಖರನ ಮೇಲೆ ತಂದೆಗೆ ದುರಭಿಪ್ರಾಯ ಉಂಟಾಗುತ್ತದೆ. ಹಾಗಾಗಬಾರದು, ಎಂದುಕೊಂಡು ರವೀಂದ್ರನು ತಾನೇ ಆ ಹಣವನ್ನು ತೆಗೆದು ತಪ್ಪುಮಾಡಿದೆನೆಂದು ಒಪ್ಪಿಕೊಂಡನು. ಕಣ್ಣೀರಿಳಿಸಿ ತಪ್ಪೊಪ್ಪಿಕೊಳ್ಳುತ್ತಾ ಪದ್ಮನಾಭನ ಕಾಲಿಗೆ ಬಿದ್ದನು.

ಮೊತ್ತಮೊದಲನೇ ಸಾರಿಯಾಗಿ ಪದ್ಮನಾಭನಿಗೆ ರವೀಂದ್ರನ ಮೇಲೆ ಅಸಹ್ಯ ಹುಟ್ಟಿತು. "ನಿನ್ನನ್ನು ಒಳ್ಳೆಯ ರೀತಿಯಲ್ಲಿ ಬೆಳೆಸಿ ಪ್ರಯೋಜಕನನ್ನಾಗಿ ಮಾಡುವೆನೆಂದು ನಿನ್ನ ತಂದೆಗೆ ಮಾತು ಕೊಟ್ಟು, ಅದನ್ನು ಉಳಿಸಲು ಬಹಳ ಪ್ರಯತ್ನಪಟ್ಟೆ. ಎಲ್ಲವೂ ಬೂದಿಗೆ ಹಾಕಿದ ಪನ್ನೀರಾಗಿಹೋಯಿತು." ಎಂದನು. ಈ ತಿರಸ್ಕಾರವನ್ನು ಕೇಳಿ ರವೀಂದ್ರನು ಏನೂ ಹೇಳದೆ ಭಾರವಾದ ಮನಸ್ಸಿನಿಂದ ತಲೆ ತಗ್ಗಿಸಿಕೊಂಡು ಹೊರಟುಹೋದನು.

ಮುಂದೆ ಕೆಲವು ದಿನಗಳ ಮೇಲೆ, ಒಂದು ಜೂಜಿನ ಕಟ್ಟೆಯಲ್ಲಿ ಶೇಖರನು ಯಾವನ ಮೇಲೆಯೋ ರೇಗಿಬಿದ್ದು ಹೊಡೆದನು. ಆ ಏಟಿನಿಂದ ಹೊಡೆತ ತಿಂದವನು ಪ್ರಾಣಬಿಟ್ಟನು. ಶೇಖರನು ತಪ್ಪಿಸಿಕೊಂಡು ಓಡಿದನು.

ಈ ದುರಂತ ಪ್ರಕರಣದಲ್ಲಿ ಹಂತಕನು ಶೇಖರನೇ ಎಂದು ತಿಳಿದಿದ್ದ ರಾಜಭಟರು ಅವನನ್ನು ಹುಡುಕಿ ಹಿಡಿದುಬಿಟ್ಟರು. ಅವನ ಅಪರಾಧದ ನಿರ್ಧಾರಕ್ಕೆ ಪ್ರತ್ಯಕ್ಷ ಸಾಕ್ಷಿಗಳೂ ಇದ್ದರು. ಈ ವಾರ್ತೆಯನ್ನು ಕೇಳಿ ಪದ್ಮನಾಭನು ನಗರಕ್ಕೆ ಓಡಿಬಂದನು.

ಶೇಖರನ ವಿಚಾರಣೆ ನಡೆಯಿತು. ರವೀಂದ್ರನು ಶೇಖರನನ್ನು ಕಾಪಾಡಲು, ಕೊಲೆ ನಡೆದ ಸಮಯದಲ್ಲಿ ಶೇಖರನು ತನ್ನ ಬಿಡಾರದಲ್ಲಿ ತನ್ನ ಜತೆಯಲ್ಲೇ ಇದ್ದನೆಂದು ಸಾಕ್ಷಿ ಹೇಳಿದನು. ಆದರೆ ಶೇಖರನು ಕೊಲೆ ಮಾಡಿದುದನ್ನು ಕಣ್ಣಾರೆ ಕಂಡವರು ಅನೇಕರಿದ್ದುದರಿಂದ, ರವೀಂದ್ರನ ಸಾಕ್ಷಿ ಬಿದ್ದುಹೋಯಿತು. ಶೇಖರನೇ ಕೊಲೆಗಾರನೆಂದು ಸಿದ್ಧವಾಗಿ ಅವನಿಗೆ ಯಾವಜ್ಜೀವ ಕಾರಾಗೃಹದ ಶಿಕ್ಷೆ ಬಿದ್ದಿತು.

ಊರಿನಿಂದ ನಗರಕ್ಕೆ ಹೋದಂದಿನಿಂದಲೂ ಶೇಖರನು ಎಲ್ಲಾ ದುರ್ವ್ಯಸನಗಳಿಗೂ ಗುರಿಯಾಗಿ ಕ್ರಮೇಣ ಪತನವಾಗಿ ಹೋದನೆಂದು ಪದ್ಮನಾಭನಿಗೆ ಈಗ ಸ್ಪಷ್ಟವಾಗಿ ತಿಳಿದುಹೋಯಿತು. ಅವನು ರವೀಂದ್ರನ ಮೇಲೆ ಉರಿದುರಿದು ಬೀಳುತ್ತ, "ನೀನೊಬ್ಬ ದೊಡ್ಡ ದ್ರೋಹಿ! ಮಿತ್ರ ದ್ರೋಹಿ! ಸಂಘ ದ್ರೋಹಿ! ಸಮಾಜ ದ್ರೋಹಿ! ಮಹಾ ಪಾಪಿ! ವಿಶ್ವಾಸಘಾತಕ! ಮಹಾ ಸ್ವಾರ್ಥಿ! ನೀನು ನನ್ನ ಮನೆ ಹಾಳು ಮಾಡಲು ಬಂದ ದುಷ್ಟಗ್ರಹ

ದಂಥವನು ! ನಡೆ ನನ್ನ ಕಣ್ಣೆದಿರಿನಿಂದ !" ಎಂದು ಬೈದು ಹೊರಗೆ ದೂಡಿಬಿಟ್ಟನು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ. ಪದ್ಮನಾಭನು ರವೀಂದ್ರನನ್ನು ಹಾಗೆ ನಿಂದಿಸಿದನೇಕೆ? ತನ್ನ ಮಗನು ಕೆಟ್ಟು ಹಾಳಾಗಿಹೋದುದನ್ನು ನೋಡಿ ಅವನ ಬುದ್ಧಿ ಮಂಕಾಯಿತೆ ? ರವೀಂದ್ರನನ್ನೇ ಮಗನಂತೆ ನೋಡಿಕೊಂಡು ತೃಪ್ತಿಯಿಂದಿರಬಹುದಿದ್ದಿತಲ್ಲಾ ? ಹಾಗಾದರೆ ಅವನಲ್ಲಿ ಮೊದಲಿನಿಂದಲೂ ಆ ಇಬ್ಬರು ಹುಡುಗರ ಮೇಲೆ ಭೇದಬುದ್ಧಿಯಿದ್ದಿತೇನು ? ಈ ಸಂದೇಹಗಳಿಗೆ ತಕ್ಕ ಸಮಾಧಾನ ತಿಳಿದಿದ್ದೂ ಹೇಳದೆ ಹೋದರೆ ನಿನ್ನ ತಲೆಯೊಡೆದು ಪುಡಿಯಾಗುತ್ತದೆ !" ಎಂದು ಹೇಳಿತು. ಅದಕ್ಕೆ ತ್ರಿವಿಕ್ರಮನು ಹೀಗೆಂದನು :

"ಪದ್ಮನಾಭನಲ್ಲಿ ಭೇದಬುದ್ಧಿ ಲವಲೇಶವೂ ಇರಲಿಲ್ಲ. ಅವನ ಬುದ್ಧಿಗೆ ಮಂಕು ಕವಿಯಲೂ ಇಲ್ಲ. ಸ್ನೇಹವೆಂದರೇನೆಂದೂ, ಜವಾಬ್ದಾರಿ ಅಂದರೇನೆಂದೂ ಅವನಿಗೆ ಚೆನ್ನಾಗಿ ಗೊತ್ತಿದೆ. ರವೀಂದ್ರನಲ್ಲಿ ಸ್ನೇಹವೂ ಬಾಧ್ಯತೆಯೂ ಸ್ವಲ್ಪಕೂಡ ಇರಲಿಲ್ಲ. ಅಂತಲೇ ಪರಮ ದ್ರೋಹಿಯಾಗಿ ಪ್ರವರ್ತಿಸಿದನು. ನಿಜಕ್ಕೂ ಅವನು ತನ್ನ ಗೆಳೆಯನ ಒಳಿತನ್ನು ಬಯಸುವವನಾಗಿರುತ್ತಿದ್ದರೆ, ಶೇಖರನು ವಕ್ರಮಾರ್ಗಕ್ಕೆ ಬಿದ್ದಾಗಲೇ ಅವನ ತಂದೆಯ ಹತ್ತಿರ ಹೇಳಿರಬೇಕಿತ್ತು. ಲೋಕಾಭಿಪ್ರಾಯಕ್ಕೆ ಕಟ್ಟುಬಿದ್ದು ಪ್ರವರ್ತಿಸುವ ಮನೋಭಾವವು ಮನುಷ್ಯರಲ್ಲಿ ಸಹಜವಾಗಿಯೇ ಇರುತ್ತದೆ. ನಗರಕ್ಕೆ ಹೋದಮೇಲೆ ಶೇಖರನ ನಡತೆಯನ್ನು ಕುರಿತು ಸರಿಯಾದ ಅಭಿಪ್ರಾಯ ಹೇಳಬಲ್ಲವನು ರವೀಂದ್ರನೊಬ್ಬನೇ. ಆದರೆ ಅವನು ತನ್ನ ಕ್ಷೇಮಮಾತ್ರ ನೋಡಿಕೊಂಡು ಶೇಖರನನ್ನು ಕುರಿತು ಅವನ ತಂದೆಗೆ ಹೇಳಲು ಹೆದರಿದನು. ಅವನು ಹೆದರದೆ ನಡೆದುದನ್ನು ಹೇಳಿಬಿಟ್ಟಿದ್ದರೆ ಪದ್ಮನಾಭನು ತನ್ನ ಮಗನನ್ನು ಅಂಕೆಯಲ್ಲಿಟ್ಟು, ಅವನ ಪತನವನ್ನು ತಡೆಯುತ್ತಿದ್ದನು. ಆದರೆ ಸ್ವಾರ್ಥವನ್ನೇ ನೋಡಿಕೊಂಡಿದ್ದ ರವೀಂದ್ರನು, ಶೇಖರನ ಅಧಃ ಪಾತಾಳದ ದಾರಿಯನ್ನು ಇನ್ನಿಷ್ಟು ದೊಡ್ಡದೇ ಮಾಡಿದನು. ಅವನು ಶೇಖರನ ಕಳ್ಳತನವನ್ನೂ ಕೊಲೆಯನ್ನೂ ಮುಚ್ಚಿಡಲು ಯತ್ನಿಸಿದ್ದು ಕೂಡಾ ಸ್ವಾರ್ಥದಿಂದಲೇ. ಅದರಿಂದಲೇ ರವೀಂದ್ರನು ಸಂಘದ್ರೋಹಿಯಾದನು. ಪದ್ಮನಾಭನಿಗೆ ಮಗನು ಶಾಶ್ವತವಾಗಿ ದೂರವಾಗಿ ಹೋಗಲು ಕಾರಣನಾದವನು ರವೀಂದ್ರನೇ ಎನ್ನಲು ಸಂದೇಹವೇನೂ ಇಲ್ಲ".

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಎಂದಿನಂತೆ ಮರದಕೊಂಬೆಯನ್ನು ಹಿಡಿದು ನೇತಾಡತೊಡಗಿತು.





# ಶಿಲಾವಿಗ್ರಹ

ಒಂದು ಕಾಲದಲ್ಲಿ ವಂಗ ದೇಶವನ್ನು ಧರ್ಮವೀರನೆಂಬ ರಾಜನು ಪಾಲಿಸುತ್ತಿದ್ದನು. ಅವನು ಪ್ರಜೆಗಳ ಮೆಚ್ಚುಗೆಯನ್ನು ಗಳಿಸಬೇಕೆಂಬ ಉತ್ಕಟಾಪೇಕ್ಷೆಯುಳ್ಳವನು. ಆದುದರಿಂದ ಪರಿಪಾಲನೆಯ ವಿಷಯದಲ್ಲಿ ತುಂಬಾ ಶ್ರದ್ಧೆವಹಿಸುತ್ತಿದ್ದನು. ಅವನು ಪ್ರತಿ ಗ್ರಾಮಾಧಿಕಾರಿಗೂ ರಾಜಪ್ರತಿನಿಧಿಯ ಅಂತಸ್ತನ್ನು ಕೊಟ್ಟು, ಪ್ರತಿ ವರ್ಷವೂ ಗ್ರಾಮಾಧಿಕಾರಿಗಳನ್ನು ರಾಜಧಾನಿಗೆ ಕರೆಯಿಸಿ ಅವರ ನಿವೇದಿಕೆಗಳನ್ನು ಕೇಳುವನು.

ಗ್ರಾಮಾಧಿಕಾರಿಗಳು ಆ ನಿವೇದಿಕೆಗಳಲ್ಲಿ ರಾಜನನ್ನು ವಿಪರೀತವಾಗಿ ಹೊಗಳಿ, ತಮ್ಮ ಗ್ರಾಮಕ್ಕೆ ಬೇಕಾದ ಅಗತ್ಯಗಳನ್ನು ವಿವರಿಸುವರು. ಆ ರೀತಿಯಾಗಿ ಬೇಕಾದ ಸದುಪಾಯಗಳನ್ನು ರಾಜನ ಮೂಲಕವಾಗಿ ಮಾಡಿಸಿಕೊಂಡುಬಿಡುವರು. ರಾಜನಿಗೂ ತನ್ನ ಆಳ್ವಿಕೆ ಚೆನ್ನಾಗಿರುವುದೆಂಬ ಸಂತೃಪ್ತಿಯುಂಟಾಗುತಿತ್ತು.

ಹೀಗೆ ಕೆಲವು ವರ್ಷಗಳು ಕಳೆಯಲು ಧರ್ಮವೀರ ರಾಜನಿಗೆ ತನ್ನಮೇಲೆ ಪ್ರಜೆಗಳಿಗಿರುವ ಅಭಿಮಾನವನ್ನು ಸ್ವತಃ ತಿಳಿದುಕೊಳ್ಳಬೇಕೆಂಬ ಅಭಿಲಾಷೆಯುಂಟಾಯಿತು. ಆದಕ್ಕಾಗಿ ಪ್ರತಿ ಗ್ರಾಮದಲ್ಲಿಯೂ ತನ್ನ ಶಿಲಾ ವಿಗ್ರಹವನ್ನು ಮಾಡಿಸಿ, ಸ್ಥಾಪನೆಗೊಳಿಸಿದನು. ಆ ವಿಗ್ರಹಗಳನ್ನು ಪ್ರಜೆಗಳು ಹೇಗೆ ನೋಡಿಕೊಳ್ಳುವರೆಂಬುದನ್ನು ಚಾರರ ಮೂಲಕ ತಿಳಿದುಕೊಳ್ಳ ತೊಡಗಿದನು. ಕೀರ್ತಿ ಕಾಂಕ್ಷೆಯುಳ್ಳ ರಾಜನಿಂದ ಪ್ರಜೆಗಳಿಗೆ ಒಳ್ಳೆಯದೇ ನಡೆಯುತ್ತಿತ್ತು. ಆದುದರಿಂದ ಪ್ರತಿ ಗ್ರಾಮದಲ್ಲಿಯೂ ಪ್ರಜೆಗಳು ರಾಜನ ವಿಗ್ರಹದ ಸುತ್ತಲೂ ಆವರಣವೆಬ್ಬಿಸಿ ಬಗೆಬಗೆಯ ಹೂಗಿಡಗಳನ್ನು ಬೆಳೆಯಿಸಿ, ವಿಗ್ರಹದ ಕೊರಳಿಗೆ ದಿನಾ ಹೂವಿನ ಮಾಲೆಗಳನ್ನು ತಂದು ಅಲಂಕರಿಸಿ ನಮಸ್ಕಾರಮಾಡುತ್ತ ಬರುತ್ತಿದ್ದರು.

ಈ ಸಂಗತಿ ಅನೇಕಮಂದಿ ಚಾರರ ಮೂಲಕವಾಗಿ ಅನೇಕಬಾರಿ ರಾಜನಿಗೆ ಗೊತ್ತಾಯಿತು. ದೇಶದೊಳಗಿನ ಪ್ರಜೆಗಳಿಗೆ ತನ್ನ ಮೇಲಿರುವ ಅಭಿಮಾನವನ್ನು ನೋಡಿ ರಾಜನು ಆನಂದಪರವಶನಾದನು.

ವಂಗದೇಶದೊಳಗಿನ ಎಲ್ಲಾ ಗ್ರಾಮಗಳೂ ಚೆನ್ನಾಗಿ ಕಳೆಗೊಂಡಿದ್ದುವಾದರೂ, ವಿಕ್ರಮಪುರಿ ಎಂಬ ಗ್ರಾಮವು ಒಂದು ಮುಖ್ಯ ಅಸೌಕರ್ಯದಿಂದ ತುಂಬಾ ಕಷ್ಟಕ್ಕೆ ಸಿಕ್ಕಿಬಿದ್ದಿತ್ತು. ಆ ಗ್ರಾಮವನ್ನು ಪೀಡಿಸುವುದು ನೀರಿನ ಸಮಸ್ಯೆಯೇ, ಆ ಗ್ರಾಮದ ಒಡೆಯನಾದ ವೀರದಾಸನು ರಾಜನ ಮುಂದೆ

ರಾಂಬಾಬು

ಒಪ್ಪಿಸಿದ ನಿವೇದಿಕೆಯಲ್ಲಿ ನೀರಿನ ಕಷ್ಟವನ್ನು ಕುರಿತು ಸ್ಪಷ್ಟವಾಗಿ ವಿವರಿಸಿ ಹೇಳಿದನು.

ರಾಜನು ವಿಕ್ರಮಪುರಿಯ ನಿವಾಸಿಗಳಿಗಾಗಿ ದೂರ ದಲ್ಲಿದ್ದ ನದಿಯ ನೀರನ್ನು ಬಂಡಿಗಳ ಮೂಲಕ ಪ್ರಜೆ ಗಳಿಗೆ ತಲಪಿಸುವ ಏರ್ಪಾಡು ಮಾಡಿದನು. ಆದರಿಂದ ಗ್ರಾಮ ನಿವಾಸಿಗಳೆಲ್ಲರಿಗೂ ಪ್ರಯೋಜನವಾಗಲಿಲ್ಲ.

ಗ್ರಾಮದೊಳಗಿರುವ ದೊಡ್ಡವರ ಕುಟುಂಬಗಳಿಗೆ ನೀರುಮುಟ್ಟಿದನಂತರ, ಉಳಿದ ನೀರು ಉಳಿದ ಮನೆಗಳಿಗೆ ಕೇವಲ ಒಂದೊಂದೇ ಬಿಂದಿಗೆಯಷ್ಟೇ ದೊರೆಯುತ್ತಿತ್ತು. ಅದರಲ್ಲಿ ಕಸಿವಿಸಿ, ಗಲಾಟೆ, ಜಗಳ ಬೇರೆ. ಆದುದರಿಂದ ವೀರದಾಸನು ಮಾರಣೇ ವರ್ಷ ದಲ್ಲಿ ರಾಜನಿಗೆ ನಿವೇದಿಕೆ ಸಮರ್ಪಿಸುವಾಗ, "ಮಹಾ ರಾಜರೇ, ನೀವು ಬಂಡಿಗಳಲ್ಲಿ ನದಿಯ ನೀರನ್ನು ನಮ್ಮ ಗ್ರಾಮಕ್ಕೆ ಕಳುಹಿಸಲು ಎಷ್ಟೋ ಪ್ರಯಾಸ ಪಡುವಿರಾದರೂ, ನಮ್ಮ ಕಷ್ಟ ಅದರಿಂದ ತೀರುವಂತೆ ಕಾಣುವುದಿಲ್ಲ. ತಾವು ನಮ್ಮ ಗ್ರಾಮಕ್ಕೆ ಜಲವೇಧಕ ರನ್ನು ಕಳುಹಿಸಿ, ಒರತೆ ಇರುವ ಸ್ಥಳವನ್ನು ನಿರ್ಣಯಿಸಿ ಆ ಪ್ರದೇಶದಲ್ಲಿ ಬಾವಿಯನ್ನು ತೋಡಿ ಸಿದರೆ ನಮ್ಮ ನೀರಿನ ಕೊರತೆ ತೀರಿಹೋಗಬಹುದು. ತಾವು ದೊಡ್ಡ ಮನಸ್ಸಿನಿಂದ ಅಷ್ಟು ಮಾಡುವಿ ರೆಂದು ನಂಬುತ್ತೇವೆ," ಎಂದನು.

ವೀರದಾಸನು ಕೇಳಿಕೊಂಡಂತೆ ರಾಜನು ಹತ್ತು ಮಂದಿ ಭೂಗರ್ಭದ ಜಲವೇಧಕರನ್ನು ವಿಕ್ರಮಪುರಿಗೆ ಕಳುಹಿಸಿದನು. ಅವರು ಊರೆಲ್ಲಾ ತಿರುಗಾಡಿ ಎಲ್ಲಿಯೂ ನೀರಿನ ಒರತೆ ಬರುವುದಿಲ್ಲವೆಂದೇ ತಿಳಿದರು. ಮತ್ತೂ ಬಿಡದೆ ಇನ್ನಷ್ಟು ಪರಿಶೀಲನೆ ನಡೆಸಿ, ಊರಿನ ಮಧ್ಯದಲ್ಲಿ ರಾಜನ ಶಿಲಾವಿಗ್ರಹದ ಕೆಳಗೆ ಪುಷ್ಕಳವಾದ ನೀರಿನ ಒರತೆ ಯಿರುವು ದೆಂಬುದನ್ನು ಕಂಡುಹಿಡಿದರು. ಜಲವೇಧಕರು ವೀರದಾಸನೊಂದಿಗೆ, "ಈ ಪ್ರಾಂತದಲ್ಲಿ ಬೇರೆ ಎಲ್ಲಿಯೂ ನೀರು ಬರುವ ಸಾಧ್ಯತೆಯೇ ಇಲ್ಲ. ಆದರೆ ಮಹಾರಾಜರ ಶಿಲಾವಿಗ್ರಹದ ಸ್ಥಳದಲ್ಲಿ ಬಾವಿ ತೋಡಿದರೆ ಬೇಕಾದಷ್ಟು ನೀರುಬರುತ್ತದೆ" ಎಂದರು. ವೀರದಾಸನು ರಾಜನ ಬಳಿಗೆ ಹೋಗಿ ಜಲವೇಧಕರ



ಸೂಚನೆಯನ್ನು ಬಿನ್ನವಿಸಿ, ವಿಗ್ರಹವಿರುವ ಸ್ಥಳದಲ್ಲಿ ಬಾವಿತೋಡಲು ಅನುಜ್ಞೆ ಕೊಡಬೇಕೆಂದು ಕೇಳಿದನು.

ಅದನ್ನು ಕೇಳಿ ಧರ್ಮವೀರನು ಕೋಪದಿಂದ ಕೆಂಗಣ್ಣು ಮಾಡಿಕೊಂಡು, "ಇಂಥಾ ಮಾತು ನನ್ನ ಮುಂದೆ ಹೇಳಬೇಕಾದರೆ ನಿನಗೆಷ್ಟು ಧೈರ್ಯ!" ಎಂದು ಬೈದು, ವೀರದಾಸನನ್ನು ಪದವಿಯಿಂದ ತೊಲಗಿಸಿ, ಜಲವೇಧಕರನ್ನು ಕಾರಾಗೃಹದಲ್ಲಿ ಹಾಕಿಸಿಬಿಟ್ಟನು.

ಹೀಗೆ ತನ್ನ ಕೋಪವನ್ನು ಶಾಂತಪಡಿಸಿಕೊಂಡು, ರಾಜನು ವಿಕ್ರಮಪುರಿಗೆ ಮೊದಲಿಗಿಂತ ಎರಡು ಪಾಲು ನೀರು ಬಂಡಿಗಳ ಮೇಲೆ ವಿನಿಯೋಗಿಸಬೇಕೆಂದು ಆಜ್ಞೆ ಹೊರಡಿಸಿದನು. ಅದರಿಂದ ನೀರು ಒಂದು ವ್ಯಾಪಾರ ಪದಾರ್ಥದಂತಾಗಿ ಬಡಜನರು ನೀರಿನ ಕಷ್ಟವನ್ನು ಬಾಯಿ ಮುಚ್ಚಿ ಅನುಭವಿಸಿಕೊಂಡೇ ಇದ್ದರು.

ಐದಾರು ತಿಂಗಳ ಮೇಲೆ ರಾಜನು ತನ್ನ ಮೇಲೆ ವಿಕ್ರಮಪುರಿಯ ಪ್ರಜೆಗಳು ಎಂತಹ ಅಭಿಪ್ರಾಯದಲ್ಲಿದ್ದಾರೆಂಬುದನ್ನು ತಿಳಿದುಕೊಳ್ಳಲು ವೇಷ ಬದಲಾಯಿಸಿಕೊಂಡು ವಿಕ್ರಮಪುರಿಗೆ ಹೊರಟುಬಂದನು. ಅಲ್ಲಿ ಸ್ಥಾಪಿಸಿದ್ದ ರಾಜನ ಶಿಲಾವಿಗ್ರಹವು ಧೂಳಿನಿಂದ, ಕಸಕಪ್ಪುಗಳಿಂದ ವಿಕಾರ ಬಡೆದಿದ್ದಿತು. ಅದರ ಸುತ್ತಲೂ ಆವರಣದ ತುಂಬಾ ಏನೇನೋ ಹುಚ್ಚುಚ್ಚುಗಿಡಗಳೂ, ಮುಳ್ಳಿನ ಪೊದರುಗಳೂ ತುಂಬಿಹೋಗಿದ್ದುವು. ಗ್ರಾಮಸ್ಥರು ತನ್ನ ವಿಗ್ರಹದ ಮೇಲೆ ಅಶ್ರದ್ಧೆಯಾಗಿರುವರೆಂದು ಸ್ಪಷ್ಟವಾಗಿ ತಿಳಿಯಿತು. ಯಾರಿಗೂ ರಾಜಭಕ್ತಿಯೋ ಗೌರವವೋ ಇಲ್ಲ. ಅವರಿಗೆ ರಾಜನಿಗಿಂತಲೂ ನೀರೇ ಮುಖ್ಯವಾಗಿದೆ. ಈ ಮಾತು ಅಲ್ಲಿಯ ಗ್ರಾಮಾಧಿಕಾರಿ ವೀರದಾಸನಿಗೆ ಚೆನ್ನಾಗಿ ಗೊತ್ತಿತ್ತು. ಅವನ ಮಾತು ಕೇಳದಿದ್ದುದು ತನ್ನದೇ ತಪ್ಪು. ಹೀಗೆ ಧರ್ಮವೀರ ರಾಜನಿಗೆ ಜ್ಞಾನೋದಯವಾಯಿತು. ಅವನು ಬೇಗನೇ ರಾಜಧಾನಿಗೆ ಹಿಂದಿರುಗಿ ಜಲವೇಧಕರನ್ನು ಕಾರಾಗೃಹದಿಂದ ಬಿಡುಗಡೆಗೊಳಿಸಿ ವಿಕ್ರಮಪುರಿಗೆ ಕಳುಹಿಸಿಕೊಟ್ಟನು. ಅವರು ಹೇಳಿದಂತೆಯೇ ತನ್ನ ವಿಗ್ರಹವಿದ್ದ ಸ್ಥಳದ್ದಲ್ಲಿ ದೊಡ್ಡ ಬಾವಿಯನ್ನು ತೋಡಿಸಿದನು. ವೀರದಾಸನನ್ನೇ ಮತ್ತೆ ಗ್ರಾಮಾಧಿಕಾರಿಯ ಪದವಿಯಲ್ಲಿರಿಸಿ, ಎಲ್ಲರಿಗೂ ಸಂತೋಷವನ್ನುಂಟುಮಾಡಿದನು.

ಮತ್ತೊಂದುಸಾರಿ ರಾಜನು ಬೇರೆ ವೇಷದಲ್ಲಿ ಆ ಊರನ್ನು ನೋಡಲು ಬಂದಾಗ, ಬಾವಿಯ ಸಮೀಪದಲ್ಲಿ ಹೂದೋಟದ ನಡುವೆ ತನ್ನ ಹಾಲುಗಲ್ಲಿನ ವಿಗ್ರಹವು ಗೌರವಭೂಷಣದಿಂದಿರುವುದನ್ನು ನೋಡಿದನು. ಈ ಹಾಲುಗಲ್ಲಿನ ವಿಗ್ರಹವನ್ನು ವಿಕ್ರಮಪುರಿಯ ಪ್ರಜೆಗಳೇ ಚಂದಾ ವಸೂಲುಮಾಡಿಕೊಂಡು ಪ್ರತಿಷ್ಠಿಸಿಕೊಂಡುದಂತೆ.





# ದಾರಿಯ ಜತೆ

ಒಂದು ಊರಿನಲ್ಲಿ ರಾಜಾರಾಮನೆಂಬವನಿದ್ದನು. ಅವನ ತಾಯಿಗೆ ಅರುವತ್ತು ವಯಸ್ಸು ಮೀರಿ ಹೋಗಿತ್ತು. ಅವಳು ರಾಜಾರಾಮನೊಂದಿಗೆ, ತನ್ನ ದೊಡ್ಡ ಮಗಳನ್ನೊಮ್ಮೆ ನೋಡಿಬರಬೇಕೆಂದು ಬಹಳ ದಿನಗಳಿಂದ ಹೇಳಿಕೊಂಡಿದ್ದಳು. ಅವಳೊಬ್ಬಳೇ ಹೋಗಲಾರಳು. ಜತೆಗೆ ಯಾರನ್ನಾದರೂ ಕಳುಹಿಸ ಬೇಕು. ಅದಕ್ಕೆ ತಕ್ಕವರು ಸಿಗಲಿಲ್ಲ; ರಾಜಾರಾಮನಿಗೆ ತೀರಿಕೆಯಿಲ್ಲ. ವೃದ್ಧ ತಾಯಿಯನ್ನು ಒಬ್ಬಂಟಿಗಳಾಗಿ ಕಳುಹಿಸಲೂ ಸಾಧ್ಯವಿಲ್ಲ. ನೋಡುತ್ತೇನೆ ಎನ್ನುತ್ತ ದಿವಸ ದೂಡಿಕೊಂಡೇ ಬಂದನು. ಅಷ್ಟರಲ್ಲಿ ಅಕಸ್ಮಾತ್ತಾಗಿ ನೆರೆಮನೆಯ ಗೋಪಾಲನು ಅದೇ ಊರಿಗೆ ಪ್ರಯಾಣಮಾಡುತ್ತಾನೆಂಬ ಸಂಗತಿ ತಿಳಿಯಿತು. ಕೂಡಲೇ ರಾಜಾರಾಮನು ಗೋಪಾಲನ ಬಳಿಗೆ ಹೋಗಿ ತನ್ನ ತಾಯಿಯನ್ನು ಕೂಡಾ ಜತೆಯಲ್ಲಿ ಕರೆದುಕೊಂಡು ಹೋಗುವಂತೆ ಕೇಳಿಕೊಂಡನು. ಗೋಪಾಲನು ದಾಕ್ಷಿಣ್ಯದಿಂದ ಹಾಗೇ ಆಗಲೆಂದು ಒಪ್ಪಿಕೊಂಡನು.

ರಾಜಾರಾಮನ ತಾಯಿ ಮಗಳ ಊರಿಗೆ ಹೊರಡಲು ಸಿದ್ಧತೆ ಮಾಡಿಕೊಂಡಳು. ಬಟ್ಟೆಗಳನ್ನು ಒಂದು ಮೂಟೆಯಾಗಿ ಕಟ್ಟಿಕೊಂಡಳು. ರಾಜಾರಾಮನು ಒಳ್ಳೆಯ ನಸ್ಯ ತಯಾರಿಸುತ್ತಿದ್ದನು. ನಸ್ಯಪ್ರಿಯನಾದ ತನ್ನ ಬಾವಯ್ಯನಿಗಾಗಿ ಒಂದು ಡಬ್ಬಿಯಲ್ಲಿ ನಸ್ಯವನ್ನು ತುಂಬಿಸಿ ತಾಯಿಗೆ ಕೊಟ್ಟು ಬಾವನಿಗೆ ಕೊಡುವಂತೆ ಹೇಳಿದನು. ತಾಯಿ ಮೊಮ್ಮಕ್ಕಳಿಗಾಗಿ ತಂಬಿಟ್ಟುಂಡೆಗಳನ್ನು ಮಾಡಿ ಕಟ್ಟಿಕೊಂಡಿದ್ದಳು. ರಾಜಾರಾಮನು ಯಾವುದಕ್ಕೂ ಇರಲೆಂದು ಸ್ವಲ್ಪ ಹಣವನ್ನೂ ತಾಯಿಗೆ ಕೊಟ್ಟನು.

ಗೋಪಾಲನಿಗೆ ಪ್ರಾಯಸಂದ ಮುದುಕಿಯನ್ನು ತನ್ನ ಜತೆಯಲ್ಲಿ ಕರೆದೊಯ್ಯುವುದೆಂದರೆ ಏನೋ ಬೇಡದ ಭಾರ ಹೊರುವಂತೆ ಕಂಡರೂ, ಸಾಧ್ಯವಿಲ್ಲವೆನ್ನಲಾಗದೆ ಒಪ್ಪಿಕೊಂಡಿದ್ದನು. ಮುಂಜಾನೆಯಲ್ಲೇ ಇಬ್ಬರೂ ಹೊರಟು ಊರುದಾಟಿದರು.

ಆಗ ಗೋಪಾಲನು, "ದೊಡ್ಡಮ್ಮಾ, ನಿಮ್ಮ ಹತ್ತಿರ ಹಣವೇನಾದರೂ ಇದ್ದರೆ ನನ್ನ ಹತ್ತಿರ ಕೊಟ್ಟುಬಿಡಿ. ಭದ್ರವಾಗಿಟ್ಟುಕೊಳ್ಳುತ್ತೇನೆ" ಎಂದನು. ವೃದ್ಧಳು ಹಣದ ಚೀಲವನ್ನು ಅವನ ಕೈಗೆ ಕೊಟ್ಟಳು. ಅದನ್ನು ಅವನು ತನ್ನ ಚೀಲದಲ್ಲಿ ಹಾಕಿಕೊಂಡು ಸೊಂಟದಲ್ಲಿ ಕಟ್ಟಿಕೊಂಡನು.

ಎಂ. ಕೆ. ಈಶ್ವರರಾವ್



ಮಧ್ಯಾಹ್ನದ ಹೊತ್ತಿಗೆ ಅವರು ಯಾವುದೋ ಒಂದು ಊರನ್ನು ತಲಪಿದರು. ಆಗ ಆಕಸ್ಮಿಕವಾಗಿ ಮಳೆ ಸುರಿಯಲು ಪ್ರಾರಂಭವಾಯಿತು. ಊರ ಹೊರಗೆ ಗುಡಿಸಲುಗಳ ನಡುವೆ ಒಂದು ಹಂಚಿನ ಮನೆ ಕಂಡಿತು. ಗೋಪಾಲನು ಆ ಮನೆಯ ಬಾಗಿಲನ್ನು ದಡದಡನೆ ಬಡಿದನು. ಕಿಟಿಕಿಯಿಂದ ಒಳಗಿದ್ದ ಹೆಂಗುಸು ಬಗ್ಗಿ ನೋಡಿ, "ಯಾರಪ್ಪಾ ನೀನು? ಏನು ಬೇಕು?" ಎಂದು ಕೇಳಿದಳು.

"ಮಳೆ ಜೋರಾಗುವ ಹಾಗಿದೆ. ಸ್ವಲ್ಪ ನಿಮ್ಮ ಮನೆಯಲ್ಲಿ ನಿಲ್ಲಲು ಸ್ಥಳ ಕೊಟ್ಟರೆ ಸಾಕು" ಎಂದನು ಗೋಪಾಲ. "ಆಗುವುದಿಲ್ಲ. ಮನೆಯಲ್ಲಿ ಗಂಡಸರಿಲ್ಲ. ಬೇರೆಲ್ಲಿಗಾದರೂ ಹೋಗು" ಎಂದಳು ಒಳಗಿನವಳು ಖಂಡಿತ ಧ್ವನಿಯಲ್ಲಿ. ಆಗ ಗೋಪಾಲನೊಂದಿಗೆ ಬಂದ ವೃದ್ಧಳು ಕಿಟಿಕಿಯ ಹತ್ತಿರ ಬಂದು, "ಮಳೆಯಲ್ಲಿ ಒದ್ದೆ ಮುದ್ದೆಯಾಗುತ್ತಿರುವೆವಮ್ಮಾ. ನಿನ್ನ ತಾಯಿಯಂಥವಳು ನಾನು. ನಮ್ಮ ಹುಡುಗ ನಿನಗೆ ಅಣ್ಣನ ಹಾಗೆ. ಸ್ವಲ್ಪ ಬಾಗಿಲು ತೆರೀಮ್ಮಾ, ಪರವಾಯಿಲ್ಲ" ಎಂದಳು.

ಮುದುಕಿಯನ್ನು ನೋಡಿದ ಕೂಡಲೇ ಗೃಹಿಣಿ ಒಂದು ಬಾಗಿಲ ತೆರೆದಳು ಮರುಕ್ಷಣದಲ್ಲಿ ವೃದ್ಧಳು ಮಾತು ಪ್ರಾರಂಭಿಸಿ ಯಾವುದೋ ತಲಾಂತರದ ಸಂಬಂಧವನ್ನು ಮಗುಚಿದಳು. ಆಗ ವೃದ್ಧಳು ಬೇಡೆಂದರೂ ಕೇಳದೆ, ಗೃಹಿಣಿ ಒಲೆಹಚ್ಚಿ ವೃದ್ಧಳಿಗೂ ಗೋಪಾಲನಿಗೂ ಅಡಿಗೆಮಾಡಿ ಬಿಸಿಬಿಸಿ ಊಟ ಬಡಿಸಿದಳು. ಅಷ್ಟೆಲ್ಲ ಆಗುವಾಗ ಮಳೆ ನಿಂತು ಬಿಸಿಲು ಹೊರಟಿತು.

"ಇನ್ನು ನಾವು ಬರುತ್ತೇವಮ್ಮ. ಬಹಳದೂರ ಹೋಗಬೇಕು" ಎಂದು ವೃದ್ಧಳು ಹೊರಟು ನಿಲ್ಲಲು, ಹಿಂದಿರುಗಿ ಪ್ರಯಾಣಮಾಡುವಾಗ ಒಂದು ಹೊತ್ತು ಇರುತ್ತೇನೆಂದು ಮುದುಕಿಯಿಂದ ಮಾತು ತೆಗೆದುಕೊಂಡ ಮೇಲೆಯೇ ಹೋಗಲಿಕ್ಕೆ ಬಿಟ್ಟಳು ಆ ಗೃಹಿಣಿ.

"ಒಳ್ಳೆಯ ಮಾತುಗಳಿಂದ ಇನ್ನೊಬ್ಬರನ್ನು ನಮ್ಮವರನ್ನಾಗಿ ಮಾಡಿಕೊಳ್ಳಬಹುದಪ್ಪಾ, ನೋಡಿದೆಯಾ? ಯಾವಳೋ ಏನೊ? ಎಷ್ಟು ಉಪಚಾರಮಾಡಿದಳು!" ಎಂದಳು ವೃದ್ಧೆ ಗೋಪಾಲನೊಂದಿಗೆ.

ಅವರು ಒಂದು ಬಳಸುದಾರಿಯಲ್ಲಿ ನಡೆಯುತ್ತಿದ್ದಾಗ ದಾರಿಗೆ ಅಡ್ಡವಾಗಿ ಒಂದು ನಾಗರಹಾವು ಮಲಗಿರುವುದು ಕಂಡುಬಂತು. ಅದನ್ನು ನೋಡಿ ಗೋಪಾಲ ಹೆದರಿ ಗಟ್ಟಿಯಾಗಿ ಕೂಗುತ್ತ ಚಪ್ಪಾಳೆ ತಟ್ಟಿದನು. ಆದರೂ ಹಾವು ಕದಲಲಿಲ್ಲ.

ಆಗ ಮುದುಕಿ ತನ್ನ ಕೈಯಲ್ಲಿದ್ದ ಕೋಲನ್ನು ನೆಲದ ಮೇಲೆ ಗಟ್ಟಿಯಾಗಿ ಕುಟ್ಟಿದಳು. ಹಾವು ತಲೆಯೆತ್ತಿ ನೋಡಿ ಬದಿಯಲ್ಲಿದ್ದ ಪೊದರಿನೊಳಗೆ ಹೊರಟುಹೋಯಿತು.

"ಹಾವಿಗೆ ಕಿವಿಗಳಿಲ್ಲ. ನೆಲ ಅದುರಿದರೆ ಅದಕ್ಕೆ ಗೊತ್ತಾಗಿ ಕದಲುತ್ತದೆ" ಎಂದು ಮುದುಕಿ ಗೋಪಾಲನಿಗೆ ತಿಳಿಸಿದಳು.

ಸಾಯಂಕಾಲದ ಹೊತ್ತಿನಲ್ಲಿ ಅವರು ಒಂದು ಗುಡ್ಡವನ್ನು ಸುತ್ತಿಕೊಂಡು ಹೋಗುವ ದಾರಿಯಲ್ಲಿ ನಡೆಯುತ್ತಿರುವಾಗ, ಯಾವನೋ ಒಬ್ಬ ದಾರೀ ಹೊಡಕ ಫಕ್ಕನೆ ಅವರ ಮುಂದೆ ಹಾರಿ, ಚೂರಿಯನ್ನು ತೋರಿಸಿ ಗೋಪಾಲನೊಂದಿಗೆ, "ನಿನ್ನ ಹಣವನ್ನೆಲ್ಲ ತೆಗೆದು ಕೆಳಗಿಡು! ಇಲ್ಲದಿದ್ದರೆ!" ಎಂದು ಚೂರಿ ಕುಣಿಸಿದನು.

ಗೋಪಾಲನು ತಲೆಯಿಂದ ಪಾದದ ವರೆಗೂ ನಡುಗಿದನು. ಅವನು ಸೊಂಟದಿಂದ ಹಣದ ಚೀಲ ತೆಗೆದುಕೊಡುವನೇನೋ ಎಂದು ಮುದುಕಿಗೆ ಸಂದೇಹವಾಗಿ, "ಇರಪ್ಪಾ, ಹಾಳಾದ ಹಣಕ್ಕೋಸ್ಕರ ಪ್ರಾಣ ತೆಗೆದು ಪಾಪಿಯಾಗಬೇಡ. ಹಣ ನನ್ನ ಹತ್ತಿರ ಇದೆ. ಇಲ್ಲದವನನ್ನು ಹೆದರಿಸಿ ಪ್ರಯೋಜನವೇನಿದೆ?" ಎನ್ನುತ್ತ ಗಂಟುಬಿಚ್ಚಿ, ಅದರೊಳಗಿದ್ದ ಡಬ್ಬಿಯನ್ನು ತೆಗೆದು, ಅದರ ಬಾಯಿಯನ್ನೆಬ್ಬಿಸಿ ಅದರಲ್ಲಿದ್ದ ನಸ್ಯವನ್ನು ಕಳ್ಳನ ಕಣ್ಣಿನ ಕಡೆಗೆ ಹಾರಿಸಿದಳು. ಕಳ್ಳ ಅಯ್ಯೋ ಎನ್ನುತ್ತ ಚೂರಿಯನ್ನು ಕೆಳಗೆ ಬಿಟ್ಟು ಕಣ್ಣುಗಳನ್ನು ತಿಕ್ಕಿಕೊಳ್ಳತೊಡಗಿದನು.

ಮುದುಕಿ ಚೂರಿಯನ್ನೆತ್ತಿಕೊಂಡು ಗೋಪಾಲನಿಗೆ ಸೈಗೆ ಮಾಡುತ್ತ "ಅವನನ್ನು ತಿವೀಬೇಡ್ವೋ. ಹೊಟ್ಟೆಯ ಪಾಡಿಗೆ ಇಂಥಾ ಹಾಳು ಕೆಲಸಕ್ಕೆ ಬಂದ. ಅವನನ್ನು ಕೊಂದರೆ ನಮಗೇನು ಲಾಭ ಹೇಳು!" ಎಂದಳು ಗೋಪಾಲನನ್ನು ತಡೆಯುವವಳ ಹಾಗೆ. ಕಳ್ಳನು ಅದನ್ನು ಕೇಳಿ ಹೆದರಿ ಕಣ್ಣು ಸರಿಯಾಗಿ ಕಾಣಿಸದಿದ್ದರೂ ಮುಲುಗುತ್ತಾ ಎತ್ತಲೋ ಓಡಿಹೋದನು. ಚೂರಿಯನ್ನು ಮುದುಕಿ ತನ್ನ ಗಂಟಿನಲ್ಲಿ ಕಟ್ಟಿಕೊಂಡಳು.

"ಆಪತ್ತು ಬಂದ ಕೂಡಲೇ ಆಲೋಚನೆ ಮಾಡುವುದನ್ನು ಬಿಟ್ಟು ಹೆದರಿ ಮರಗಟ್ಟಿ ನಿಂತರೆ ಲಾಭವಿಲ್ಲಪ್ಪಾ. ತಲೆ ಉಪಯೋಗಿಸಬೇಕು" ಎಂದಳು ಮುದುಕಿ. ಆ ಮಾತು ಕೇಳಿ ಗೋಪಾಲ ಏನೂ



ಹೇಳದೆ ಮತ್ತೊಮ್ಮೆ ತಲೆವಾಗಿದ. ದೀಪ ಹಚ್ಚುವ ಹೊತ್ತಿಗೆ ಅವರು ಒಂದು ನಗರವನ್ನು ತಲಪಿದರು. ಅದನ್ನು ದಾಟಿ ಇನ್ನೂ ದೂರ ಹೋಗಬೇಕಾಗಿತ್ತು.

"ನಾವು ಊರುಮುಟ್ಟುವಾಗ ಜಾಮ ರಾತ್ರಿ ಯಾಗುತ್ತದೆ. ನನಗೆ ಹಸಿವೆಯಾಗಿದೆ. ಅಂಗಡಿಗೆ ಹೋಗಿ ಏನಾದರೂ ತಿಂದು, ನಿಮಗೂ ಏನಾದರೂ ಹಣ್ಣು ತರುತ್ತೇನೆ" ಎಂದು ಹೇಳಿ ಗೋಪಾಲನು ಹೊರಟುಹೋದನು. ಮುದುಕಿ ಒಂದು ಮನೆಯ ಜಗಲಿಯಲ್ಲಿ ಕುಳಿತಳು.

ಎಷ್ಟು ಹೊತ್ತಾದರೂ ಗೋಪಾಲನು ಬರಲಿಲ್ಲ. ಏನಾಯಿತೋ ನೋಡೋಣವೆಂದು ಮುದುಕಿ ಅವನು ಹೊಕ್ಕ ಅಂಗಡಿಯ ಕಡೆಗೆ ಹೋದಳು. "ತಿಂಡಿಗಿಂಡಿ ಎಲ್ಲಾ ಚೆನ್ನಾಗಿ ತಿಂದು ಹಣ ಕೇಳುವಾಗ ಹಣದ ಚೀಲ ಯಾರೋ ಹೊಡೆದುಕೊಂಡರೆಂದು ಏನೇನೋ ಹೇಳುತ್ತಾನೆ. ಇಂಥಾ ಬಹಳ ಮಂದಿ ಯನ್ನು ನೋಡಿದ್ದೇವೆ. ಹಣಕೊಡದೆ ಹೋದರೆ ನಿನ್ನ ತಲೇ ಮೇಲೆ ಮೂಟೆ ಹೊರಿಸುತ್ತೇನೆ. ಸುಮ್ಮನೆ ಬಿಡುತ್ತೇನೆಂದು ಮಾಡಿದಿಯೇನು?" ಎಂದು ಅಂಗಡಿ ಯವನು ಗೋಪಾಲನಿಗೆ ಜೋರುಮಾಡುತ್ತಿದ್ದನು.

ನಡೆದ ಸಂಗತಿ ಮುದುಕಿಗೆ ಗೊತ್ತಾಯಿತು. ಕೂಡಲೇ ಅವಳು ತನ್ನ ಗಂಟುಬಿಚ್ಚಿ ಒಂದು ಬಟ್ಟೆಯ ತುದಿಯಲ್ಲಿ ಕಟ್ಟಿದ್ದ ಹಣವನ್ನು ತೆಗೆದು, ಗೋಪಾಲನು ತಿಂದ ತಿಂಡಿಯ ದುಡ್ಡನ್ನು ಎಣಿಸಿ ಕೊಟ್ಟು "ಇನ್ನು ಬಾರಪ್ಪ, ಗೋಪಾಲೂ" ಎಂದಳು.

ದಾರಿಯಲ್ಲಿ ನಡೆಯುತ್ತ ಗೋಪಾಲನು "ನನ್ನ ಹಣದಚೀಲ ಎಲ್ಲೋ ಜಾರಿಬಿದ್ದು ಹೋಯಿತೋ, ಯಾರಾದರೂ ಎತ್ತಿ ಹಾಕಿದರೋ ಗೊತ್ತಾಗು ವುದಿಲ್ಲ. ನಿಮ್ಮ ಹತ್ತಿರವಿದ್ದ ಹಣವೆಲ್ಲ ನನ್ನ ಕೈಗೆ ಕೊಟ್ಟಿರಲ್ಲಾ? ಇನ್ನೂ ನಿಮ್ಮ ಹತ್ತಿರ ಹಣ ಹೇಗೆ ಬಂತು?" ಎಂದು ಆಶ್ಚರ್ಯದಿಂದ ಕೇಳಿದನು.

"ಹಣವನ್ನು ಒಂದೇ ಕಡೆಯಲ್ಲಿ ಇಟ್ಟುಕೊಳ್ಳು ತ್ತಾರೇನು? ಮೂರು ನಾಲ್ಕು ಕಡೆಯಲ್ಲಿ ಅಡಗಿಸಿ ಕೊಳ್ಳಬೇಕು ಗೊತ್ತಾ?" ಎಂದಳು ಮುದುಕಿ.

ಊರಿಗೆ ಹೋಗಿ ಮಗಳ ಮನೆಯಲ್ಲಿ ಎರಡು ಮೂರು ವಾರ ಇರುವಳೇನೋ ಎಂದುಕೊಂಡ ತಾಯಿ, ಬಹು ಬೇಗನೇ ಗೋಪಾಲನೊಂದಿಗೇ ತಿರುಗಿ ಬಂದು ದನ್ನು ನೋಡಿ ರಾಜಾರಾಮನು, "ಇದೇನಮ್ಮಾ? ಆಗಲೇ ಬಂದೆಯಲ್ಲಾ?" ಎಂದು ಕೇಳಿದನು.

"ಏನು ಮಾಡಲಪ್ಪಾ? ಹೋದಾಯಿತು, ಕಣ್ಣು ತುಂಬಾ ನೋಡಿ, ಬಾಯಿ ತುಂಬಾ ಮಾತುಕತೆ ಯಾಡಿಯೂ ಆಯ್ತು. ಪಾಪ, ನಮ್ಮ ಗೋಪಾಲ ಹಿಂದಿರುಗಿಬರುವಾಗ ತನ್ನ ಜತೆಗೆ ಬರಲೇಬೇಕು ಅಂತ ಕಾಲಿಗೆ ಬಿದ್ದು ಬೇಡಿಕೊಂಡ. ಸರಿಯಪ್ಪಂತ ಹೊರಟು ಬಂದುಬಿಟ್ಟೆ" ಎಂದಳು ರಾಜಾರಾಮನ ತಾಯಿ.





# ಅತ್ರಿ

ಪುರಾಣಗಳಲ್ಲಿರುವ ಋಷಿಗಳಲ್ಲಿ ದೇವರ್ಷಿ, ಬ್ರಹ್ಮರ್ಷಿ, ರಾಜರ್ಷಿ, ವಿಪ್ರರ್ಷಿ ಹೀಗೆ ಅನೇಕ ಬಗೆಗಳವರು ಇದ್ದಾರೆ. ದಾನವರಲ್ಲಿ ಕೂಡಾ ಋಷಿಗಳಿದ್ದಾರೆ. ಇವರಲ್ಲಿ ಋಷಿಯಾದ ಅತ್ರಿ ಬ್ರಹ್ಮರ್ಷಿ ತರಗತಿಗೆ ಸೇರಿದವನು.

ಅತ್ರಿ ಋಷಿಯ ಹೆಂಡತಿಯಾದ ಅನಸೂಯೆ ಬಹು ದೊಡ್ಡ ತಪಃಶಕ್ತಿಯುಳ್ಳವಳು, ಅವಳ ತಪಃಶಕ್ತಿಯ ಮಹಿಮೆ ಎಂತಹುದೆಂದರೆ, ಒಂದು ಸಾರಿ ಬ್ರಹ್ಮ, ವಿಷ್ಣು, ಮಹೇಶ್ವರರು ತಮ್ಮ ತಮ್ಮ ವಾಹನಗಳ ಮೇಲೆ ಆರೂಢರಾಗಿ ಅತ್ರಿಯ ಆಶ್ರಮದ ಮೇಲ್ಭಾಗದಲ್ಲಿ ಮೇರುಪರ್ವತದ ಕಡೆಗೆ ಹೋಗುತ್ತಿದ್ದಾಗ, ಆಶ್ರಮದ ಸಮೀಪದಲ್ಲಿ ಮುಂದೆ ಹೋಗಲಾಗದಂತೆ ಅನಸೂಯೆಯ ತಪಃಶಕ್ತಿ ತಡೆದು ಬಿಟ್ಟಿತು. ಅವರು ಮತ್ತೊಂದು ದಾರಿಯಲ್ಲಿ ಸುತ್ತಿಕೊಂಡು ಹೋಗಬೇಕಾಗಿ ಬಂದಿತು.

ಒಂದುಸಾರಿ ಭೂಮಿಯ ಮೇಲೆ ಭಯಂಕರವಾದ ಬರಗಾಲ ಬಂದಿತು. ಅನಸೂಯೆ ತನ್ನ ತಪಃಶಕ್ತಿಯಿಂದ ಗಂಗಾನದಿಯನ್ನು ಭೂಮಿಯ ಮೇಲೆಲ್ಲಾ ಪ್ರವಹಿಸುವಂತೆ ಮಾಡಿ, ಪೈರು ಪಚ್ಚೆಗಳಿಂದ ಕಳೆಗೊಳಿಸಿ ಬರಗಾಲವನ್ನು ನಿವಾರಿಸಿದಳು.

ಇನ್ನೊಂದುಸಾರಿ ಕೌಶಿಕನೆಂಬವನು ಬೆಳಗಾದ ಕೂಡಲೇ ಸಾಯುವನೆಂಬ ಶಾಪವನ್ನು ಹೊಂದಿದನು. ಆ ಕೌಶಿಕನ ಹೆಂಡತಿ ಅನಸೂಯೆಯ ಸ್ನೇಹಿತೆ. ಅವಳಿಗೆ ವೈಧವ್ಯವು ಬಾರದಂತೆ ತಡೆಯಲು ಅನಸೂಯೆ ಒಂದು ರಾತ್ರಿಯನ್ನು ಹತ್ತು ರಾತ್ರಿಗಳಷ್ಟು ದೀರ್ಘಕ್ಕೆ ಎಳೆದು, ಶಾಪದ ಪ್ರಭಾವವನ್ನು ಅಡಗಿಸಿದಳು.

ಅತ್ರಿ ಋಷಿ ಸಂತಾನಾಪೇಕ್ಷೆಯಿಂದ ತಪಸ್ಸು ಮಾಡತೊಡಗಿದನು. ಆಗ ತ್ರಿಮೂರ್ತಿಗಳೂ ಅವನ ಮುಂದೆ ಪ್ರತ್ಯಕ್ಷರಾದರು. ತಾನು ಒಬ್ಬ ದೇವನನ್ನು ಕುರಿತು ತಪಸ್ಸು ಮಾಡುತ್ತಿದ್ದರೆ ಮೂವರೂ ಏಕೆ ಬಂದಿರೆಂದು ಅತ್ರಿ ಅವರನ್ನು ಕೇಳಿದನು.

"ನಾವು ಮೂವರೂ ನಮ್ಮ ಅಂಶಗಳಿಂದ ನಿನ್ನ ಪುತ್ರರಾಗಿ ಹುಟ್ಟುತ್ತೇವೆ" ಎಂದರು ತ್ರಿಮೂರ್ತಿಗಳು.

ಆ ಪ್ರಕಾರ ಅತ್ರಿಗೆ ಬ್ರಹ್ಮನ ಅಂಶದಿಂದ ಸೋಮನೂ, ವಿಷ್ಣುವಿನ ಅಂಶದಿಂದ ದತ್ತಾತ್ರೇಯನೂ, ಶಿವನ ಅಂಶದಿಂದ ದುರ್ವಾಸನೂ ಪುತ್ರರಾಗಿ ಹುಟ್ಟಿದರು. ಆದರೆ ಅತ್ರಿಗೆ ಅನೇಕ ಮಂದಿ

ಮಕ್ಕಳಿರುವಂತೆಯೂ ಪುರಾಣಗಳಲ್ಲಿವೆ. ಅತ್ರಿಯ ಸಂತತಿಯವರಿಗೆ ಆತ್ರೇಯರೆಂದು ಹೆಸರು. ಆ ರೀತಿಯಾಗಿ ಅತ್ರಿ ಕುಲಪತಿಯಾಗಿರುವನು.

ಶ್ರಾದ್ಧ ವಿಧಿ ಹೇಗಿರಬೇಕೆಂಬುದನ್ನು ಮೊತ್ತ ಮೊದಲು ಹೇಳಿದವನು ಅತ್ರಿಯೇ. ತಂದೆ, ತಾತ, ಮುತ್ತಾತಂದಿರಿಗೆ ಪಿಂಡಪ್ರದಾನ ಮಾಡಬೇಕೆಂದೂ, ಪ್ರತಿ ತಿಂಗಳೂ ಮಾಡುವ ಮಾಸಿಕ ಶ್ರಾದ್ಧವು ತಂದೆಗೆ ಮಾತ್ರವೇದೂ ಅತ್ರಿ ನಿಮಿ ಎಂಬವನಿಗೆ ಹೇಳಿದ್ದಾನೆ.

ರಾಜನು ದೈವಾಂಶ ಸಂಭೂತನೆಂದು ಮೊತ್ತ ಮೊದಲು ಹೇಳಿದವನು ಅತ್ರಿ ಮಹಾಮುನಿಯೇ.

ಬ್ರಹ್ಮಾವರ್ತವೆಂಬ ದೇಶದಲ್ಲಿ ಪೃಥು ಚಕ್ರವರ್ತಿ ತೊಂಬತ್ತೊಂಬತ್ತು ಅಶ್ವಮೇಧಗಳನ್ನು ಮಾಡಿ, ಸರಸ್ವತೀ ನದಿಯ ತೀರದಲ್ಲಿ ನೂರನೇ ಅಶ್ವಮೇಧ ಯಾಗವನ್ನು ಪ್ರಾರಂಭಿಸಿದನು. ಆಗ ಇಂದ್ರನು ಅಸೂಯೆಗೊಂಡು ಅವನ ಯಾಗಾಶ್ವವನ್ನು ಅಪಹರಿಸಿಬಿಟ್ಟನು. ಆಗ ಯಾಗವೇದಿಕೆಯಲ್ಲಿ ಅತ್ರಿ ಋಷಿ ಕೂಡಾ ಇದ್ದನು.

ತನ್ನ ಇದಿರಿನಲ್ಲಿಯೇ ಯಾಗಕ್ಕೆ ಭಂಗ ಬದುದನ್ನು ನೋಡಿ ಅತ್ರಿ ಮನನೊಂದು ಸಂಸಾರವನ್ನು ಬಿಟ್ಟು ತಪಸ್ಸಿಗೆ ಹೊರಡಲು ಸಿದ್ಧನಾದನು. ಆಗ ಕುಟುಂಬ ಪೋಷಣೆಯ ಭಾರಕ್ಕೆ ಮಾರ್ಗವನ್ನು ತೋರಿಸದೆ ಹೋಗಬಾರದೆಂದು ಹೆಂಡತಿ ಆಕ್ಷೇಪಿಸಿದಳು. ಭೂಮಿಯ ಪ್ರಾಣಿಗಳ ಜವಾಬ್ದಾರಿಯನ್ನು ನೋಡಬೇಕಾದವನು ಕ್ಷತ್ರಿಯ ರಾಜನೇ ಆದುದರಿಂದ ಅತ್ರಿ ಪೃಥುವಿನ ಬಳಿಗೆ ಹೋಗಿ "ನೀನು ದೇವಾಂಶವಿರುವವನಾದುದರಿಂದ, ಭೂಲೋಕದ ಇಂದ್ರನೇ" ಎಂದು ಮುಂತಾಗಿ ರಾಜನನ್ನು ಹೊಗಳಲು ಪ್ರಾರಂಭಿಸಿದನು.

ಅತ್ರಿಯ ಮಾತಿಗೆ ಗೌತಮನು ಅಭ್ಯಂತರ ಹೇಳಲು, ಅತ್ರಿ ಗೌತಮರೊಳಗೆ ವಾದವೆದ್ದಿತು. ಕಡೆಗೆ ಸನತ್ಕುಮಾರನು ಇಬ್ಬರ ವಾದವನ್ನೂ ಕೇಳಿ, "ಅತ್ರಿ ಪೃಥುವನ್ನು ಹೊಗಳಿದುದು ಸರಿಯಾದುದೇ" ಎಂದು ತೀರ್ಪು ಹೇಳಿದನು.

ಪೃಥು ಚಕ್ರವರ್ತಿ ಆತ್ಮಾನಂದಗೊಂಡು ಅತ್ರಿಗೆ ಧನವನ್ನು ಕೊಟ್ಟನು. ಪೃಥುವಿನ ತಂದೆಯಾದ ವೇನನು ಮಹಾದುಷ್ಟನಾದುದರಿಂದ ಪ್ರಜೆಗಳು ಅವನನ್ನು "ಹುಚ್ಚು ನಾಯಿ"ಯನ್ನು ಕೊಲ್ಲುವ ಹಾಗೆ ಕೊಂದರು. ಅಂತಹನ ಮಗನಾದ ತನ್ನನ್ನು ಅತ್ರಿ ಸನತ್ಕುಮಾರರು ದೈವಾಂಶ ಸಂಭೂತನೆಂದು ನಿರ್ಣಯಿಸಿದುದರಿಂದ ಪೃಥುವಿಗೆ ಅಷ್ಟು ಆನಂದವಾದುದು ಸಹಜವೇ.

"ಬಂಗಾರವನ್ನು ಕೊಟ್ಟವನು ಎಲ್ಲಾ ಆಶೆಗಳನ್ನೂ ತೀರಿಸಿದಂಥವನು" ಎಂದಿರುವನು ಅತ್ರಿ. ಕುಬೇರನ ಏಳು ಮಂದಿ ಗುರುಗಳಲ್ಲಿ ಅತ್ರಿಯೂ ಒಬ್ಬನು.



# ತುಲಸೀ ಜನ್ಮವೃತ್ತಾಂತ



ಇಂದ್ರನು ಒಮ್ಮೆ ಶಿವನನ್ನು ನೋಡಲು ಕೈಲಾಸಕ್ಕೆ ಹೋಗಿ. ಒಂದು ಕಲ್ಲಿನ ಮೇಲೆ ನಿಶ್ಚಲನಾಗಿ ಕುಳಿತಿದ್ದ ವ್ಯಕ್ತಿಯನ್ನು ನೋಡಿ. ಶಿವನಬಳಿಗೆ ಹೋಗಲು ದಾರಿ ಕೇಳಿದನು. ಆ ವ್ಯಕ್ತಿ ಮಾತಾಡದಿರುವುದನ್ನು ನೋಡಿ ಇಂದ್ರನು ತನ್ನ ವಜ್ರಾಯುಧದಿಂದ ಆವನ ನಡುನೆತ್ತಿಗೆ ಹೊಡೆದನು.

ಆ ಕೂಡಲೇ ಆ ವ್ಯಕ್ತಿಯ ತಲೆಯೊಳಗಿನಿಂದ ದಾರುಣವಾದ ಅಗ್ನಿಜ್ವಾಲೆಗಳೆದ್ದುವು. ಆ ವ್ಯಕ್ತಿ ಸಾಕ್ಷಾತ್ ಶಿವನೇ ! ಇಂದ್ರನು ಶಿವನ ಮುಂದೆ ಕ್ಷಮೆ ಕೇಳಿಕೊಂಡು, ಆ ಜ್ವಾಲೆಯಿಂದ ತಾನು ಬೂದಿಯಾಗದಂತೆ ತಪ್ಪಿಸಿಕೊಂಡನು.





ಶಿವನ ನೆತ್ತಿಯಿಂದೆದ್ದ ಆ ಅಗ್ನಿಜ್ವಾಲೆ ಆಕಾಶದಲ್ಲಿ ಹೋಗಿ ಸಮುದ್ರದಲ್ಲಿ ಬಿದ್ದು ಒಂದು ಶಿಶುವಿನ ರೂಪತಾಳಿ ತೇಲಿತು.



ಕೋಪಾಗ್ನಿಯಿಂದ ಹುಟ್ಟಿದ ಆ ಮಗು ಭಯಂಕರ ಶಕ್ತಿಯಿಂದ ಬೆಳೆಯಿತು. ಸಮುದ್ರನು ಆ ಮಗುವನ್ನು ಬ್ರಹ್ಮನಿಗೆ ಒಪ್ಪಿಸಲು, ಆ ಬಾಲಕನ ಭಾರವನ್ನು ಭರಿಸಲು ಬ್ರಹ್ಮನಿಗೂ ಅಸಾಧ್ಯವಾಯಿತು. ಆ ಬಾಲನೇ ಜಲಂಧರನೆಂಬ ರಾಕ್ಷಸ.

ಕಾಲಕ್ರಮದಲ್ಲಿ ಜಲಂಧರನು ರಾಕ್ಷಸರಿಗೆ ಪ್ರಭುವಾದನು. ಅವನು ಭೂಮಿಯ ರಾಜರನ್ನೆಲ್ಲಾ ಜಯಿಸಿ, ದೇವತೆಗಳನ್ನು ಕೂಡಾ ಜಯಿಸಲು ನಿಶ್ಚಯಿಸಿದನು.





ಅವನು ದೊಡ್ಡ ಸೇನೆಯೊಂದಿಗೆ ಇಂದ್ರನ ಅಮರಾವತಿಗೆ ದಾಳಿಯಿಟ್ಟನು. ಇಂದ್ರನ ಮೇಲೆ ಶಿವನಿಗಿದ್ದ ಕೋಪವು ಈ ರೂಪದಲ್ಲಿ ಮತ್ತೆ ಇಂದ್ರನ ಮೇಲೆಯೇ ಬಂದಿತು. ದೇವತೆಗಳು ಅಸಹಾಯರಾದರು.

ಯುದ್ಧದಲ್ಲಿ ಇಂದ್ರನೂ. ಅವನ ದೇವ ಪರಿವಾರವೂ ಸೋತುಹೋಗಿ ಜಲಂಧರನು ಅಮರಾವತಿಯನ್ನು ವಶಪಡಿಸಿಕೊಂಡನು. ಸೋತ ಇಂದ್ರನು ಕೈಲಾಸಕ್ಕೆ ಹೋಗಿ ಜಲಂಧರನನ್ನು ನಿಗ್ರಹಿಸಬೇಕೆಂದು ಶಿವನನ್ನೇ ಪ್ರಾರ್ಥಿಸಿದನು.





ಈ ಬಗೆಯ ಅಹಂಕಾರದ ಚೇಷ್ಟೆಗಳನ್ನು ಬಿಡುವಂತೆ ಶಿವನು ಜಲಂಧರನಿಗೆ ಬುದ್ಧಿ ಹೇಳಿದನು. ಅದೇನೂ ಪ್ರಯೋಜನವಾಗದೆ ಶಿವನು ಸ್ವಯಂ ಜಲಂಧರನನ್ನು ಸಂಹರಿಸಬೇಕಾಗಿ ಬಂತು. ವಿಚಿತ್ರವೆಂದರೆ, ಜಲಂಧರನನ್ನು ಏನು ಮಾಡಲಿಕ್ಕೂ ಶಿವನಿಂದ ಸಾಧ್ಯವಿರಲಿಲ್ಲ !

ಜಲಂಧರನನ್ನು ಕಾಪಾಡುವ ಮಹಾಶಕ್ತಿಯೊಂದಿದ್ದಿತು. ಅದು ಅವನ ಹೆಂಡತಿಯಾದ ಬೃಂದಾದೇವಿ ನಿತ್ಯವೂ ಮಾಡುವ ವಿಷ್ಣುಪೂಜೆ ! ಅವಳು ತನ್ನ ಗಂಡನ ಕ್ಷೇಮಕ್ಕಾಗಿ ಧ್ಯಾನಿಸುತ್ತಿರುವಾಗ ಅವನಿಗೆ ಏನೂ ಆಗದು.





ದೇವತೆಗಳು ತಮಗೆ ಸಹಕರಿಸಬೇಕೆಂದು ವಿಷ್ಣು ವನ್ನು ಬೇಡಿಕೊಂಡರು. ವಿಷ್ಣುವಿಗೆ ಇಕ್ಕಟ್ಟಿನ ಪರಿಸ್ಥಿತಿ. ಬೃಂದೆಯ ಭಕ್ತಿಯೇ ರಾಕ್ಷಸನ ಅಂಗರಕ್ಷೆ. ಆದರೆ ಜಲಂಧರನು ಸಾಯದೆ ವಿಧಿಯಿಲ್ಲ.



ವಿಷ್ಣು ಜಲಂಧರನ ರೂಪದಲ್ಲಿ ಬೃಂದೆಯ ಬಳಿಗೆ ಬಂದನು. ತನ್ನ ಗಂಡ ವಿಜಯಶಾಲಿ ಯಾಗಿ ಬಂದನೆಂದುಕೊಂಡು ಬೃಂದೆ ಧ್ಯಾನ ದಿಂದೆದ್ದಳು. ಆ ಕ್ಷಣದಲ್ಲೇ ಅತ್ತ ಶಿವನು ಜಲಂಧರನನ್ನು ಕೊಂದನು.



ಆ ಮೇಲೆ ನಡೆದ ಮೋಸವನ್ನು ತಿಳಿದು ಬೃಂದೆ ತನ್ನ ಗಂಡನ ಚಿತಿಯ ಮೇಲೆ ಸಹಗಮನ ಮಾಡಿದಳು. ಅವಳ ಚಿತಾ ಭಸ್ಮದಿಂದ ತುಲಸೀ ಗಿಡ ಹುಟ್ಟಿತು. ಅದು ವಿಷ್ಣುವಿಗೆ ಅತ್ಯಂತ ಪ್ರೀತಿಪಾತ್ರವಾದ ಗಿಡ. ಆದುದರಿಂದ ಎಲ್ಲರೂ ತುಲಸಿಯನ್ನು ಆರಾಧಿಸಿ, ತುಲಸೀದಳಗಳಿಂದ ವಿಷ್ಣುವನ್ನು ಪೂಜಿಸುವರು.



# ಪ್ರಹ್ಲಾದ

ಪುರಾಣಪ್ರಸಿದ್ಧನಾದ ಹಿರಣ್ಯಕಶಿಪು ಬ್ರಹ್ಮನನ್ನು ಕುರಿತು ದೊಡ್ಡ ತಪಸ್ಸನ್ನು ಮಾಡಲು ಹೋದಾಗ ಅವನ ಹೆಂಡತಿಯಾದ ಲೀಲಾವತಿ ಗರ್ಭಿಣಿಯಾಗಿದ್ದಳು. ಅದೇ ಸಮಯದಲ್ಲಿ ದೇವತೆಗಳಿಗೂ ದಾನವರಿಗೂ ಯುದ್ಧವೆದ್ದು, ದಾನವರಿಗೆ ಬಲಿಷ್ಠನಾದ ನಾಯಕ ನಿಲ್ಲದಿದ್ದುದರಿಂದ ರಾಕ್ಷಸರಿಗೆ ಬಲುದೊಡ್ಡ ಸೋಲುಂಟಾಯಿತು.

ಹೀಗೆ ದಾನವರನ್ನು ಸೋಲಿಸಿದ ಇಂದ್ರನ ಕೈಗೆ ಲೀಲಾವತಿ ಬಂಧಿಯಾಗಿ ಸಿಕ್ಕಿದಳು. ಆಗ ನಾರದನು ಇಂದ್ರನ ಬಳಿಗೆ ಬಂದು, ಲೀಲಾವತಿ ಮಹಾಸಾಧ್ವಿ ಎಂದು ತಿಳಿಯ ಹೇಳಿ ಅವಳನ್ನು ಬಂಧನದಿಂದ ಬಿಡುಗಡೆ ಮಾಡಬೇಕೆಂದನು.

ಲೀಲಾವತಿ ಗರ್ಭವತಿಯಾಗಿರುವ ಕಾರಣದಿಂದ, ಅವಳು ಹಡೆಯುವ ಶಿಶುವನ್ನು ಕೊಂದು, ಆಮೇಲೆ ಅವಳನ್ನು ಬಿಟ್ಟುಬಿಡುವೆನೆಂದು ಇಂದ್ರನು ಹೇಳಿದನು.

"ಲೀಲಾವತಿ ಹಡೆಯುವ ಮಗನು ಮಹಾ ವಿಷ್ಣು ಭಕ್ತನಾಗುವನು. ಅವನನ್ನು ಕೊಲ್ಲಬಾರದು. ಲೋಕಕ್ಷೇಮಕ್ಕಾಗಿ ಲೀಲಾವತಿಯನ್ನೂ, ಅವಳ ಮಗನನ್ನೂ ಕಾಪಾಡಲೇಬೇಕು" ಎಂದು ನಾರದನು ಇಂದ್ರನನ್ನು ಒಪ್ಪಿಸಿ, ಲೀಲಾವತಿಯನ್ನು ತನ್ನ ಆಶ್ರಮಕ್ಕೆ ಕರೆದುಕೊಂಡು ಹೋದನು. ಅಲ್ಲಿ ನಾರದನು ಅವಳಿಗೆ ತತ್ತ್ವೋಪದೇಶಗಳನ್ನೂ, ವಿಷ್ಣು ಭಕ್ತಿಯನ್ನೂ ಬೋಧಿಸುತ್ತಿರಲು, ಅವಳ ಗರ್ಭದೊಳಗಿದ್ದ ಶಿಶುವಿನಲ್ಲಿ ಅವು ಚೆನ್ನಾಗಿ ಅಂಟಿಕೊಂಡುವು. ಆ ಕಾರಣದಿಂದಾಗಿ ಆ ಶಿಶು ಹುಟ್ಟುವಾಗಲೇ ವಿಷ್ಣು ಭಕ್ತಿಯ ಮೂರ್ತಿಯೇ ಆಯಿತು. ಆ ಶಿಶುವೇ ಪ್ರಹ್ಲಾದ.

ಅತ್ತ ತಪಸ್ಸು ಮಾಡುತ್ತಿದ್ದ ಹಿರಣ್ಯಕಶಿಪು ಬ್ರಹ್ಮನನ್ನು ಪ್ರತ್ಯಕ್ಷ ಮಾಡಿಕೊಂಡು ಯಾವ ಪರಿಸ್ಥಿತಿಯಲ್ಲಿಯೂ ಯಾರಿಂದಲೂ ತನಗೆ ಮರಣಬಾರದಂತೆ ವರವನ್ನು ಪಡೆದು ಹಿಂದಿರುಗಿ ಬಂದನು. ತನ್ನ ಹೆಂಡತಿಯನ್ನೂ ಮಗನನ್ನೂ ನಾರದನ ಆಶ್ರಮದಿಂದ ಕರೆದುಕೊಂಡು ತನ್ನ ಮನೆಗೆ ಹೋದನು. ಶುಕ್ರಾಚಾರ್ಯರ ಮಗಂದಿರಾದ ಚಂಡಾಮರ್ಕರೆಂಬವರ ಬಳಿಯಲ್ಲಿ ವಿದ್ಯಾಭ್ಯಾಸಕ್ಕಾಗಿ ಪ್ರಹ್ಲಾದನನ್ನು ಕಳುಹಿಸಿದನು. ಅತಿ ಶೀಘ್ರ ಕಾಲದಲ್ಲೇ ಪ್ರಹ್ಲಾದನು ಸಕಲ ಶಾಸ್ತ್ರಗಳನ್ನೂ ಕಲಿತು

ಕೊಂಡು, ಸಹಪಾಠಿಗಳಾದ ಬಾಲಕರಿಗೆ ವೇದಾಂತವನ್ನೂ, ವಿಷ್ಣು ಭಕ್ತಿಯನ್ನೂ ಕಲಿಸಲು ತೊಡಗಿದನು. ಹಾಗೆ ಮಾಡಬಾರದೆಂದು ಚಂಡಾಮರ್ಕರು ಎಷ್ಟು ಹೇಳಿದರೂ ಪ್ರಹ್ಲಾದನು ಕೇಳಲಿಲ್ಲ. ವಿಷ್ಣು ತಮ್ಮ ಕುಲಕ್ಕೇ ವೈರಿ ಎಂಬುದನ್ನು ಪ್ರಹ್ಲಾದನು ಖಂಡಿಸಿದನು.

ಒಂದು ದಿನ ಹಿರಣ್ಯಕಶಿಪು ತನ್ನ ಮಗನ ಓದು ಎಲ್ಲಿಯ ವರೆಗೆ ಬಂತೆಂದು ಪರೀಕ್ಷಿಸಲು ಪ್ರಹ್ಲಾದನನ್ನು ಕರೆಯಿಸಿ, ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಮುದ್ದಿಸಿ ಏನಾದರೂ ಪದ್ಯ ಹೇಳೆಂದನು.

ಕೂಡಲೇ ಪ್ರಹ್ಲಾದನು ವಿಷ್ಣು ಸಂಕೀರ್ತನೆಯನ್ನು ಹಾಡಿದನು. ಅದನ್ನು ತಡೆದು ಹಿರಣ್ಯಕಶಿಪು, "ವಿಷ್ಣು ದೇವತೆಗಳಿಗೆ ದೇವನು. ನಮಗೆ ಜನ್ಮ ವಿರೋಧಿ. ಈಗ ಮೂರು ಲೋಕಗಳಿಗೂ ನಾನೇ ಅಧಿಪತಿ. ಆದುದರಿಂದ ನೀನು ವಿಷ್ಣುವನ್ನು ಕೀರ್ತಿಸಬೇಕಾಗಿಲ್ಲ. ಅವನಿಗೆ ಯಾವ ಮಹತ್ವವೂ ಇಲ್ಲ." ಎಂದು ಪ್ರಹ್ಲಾದನಿಗೆ ಹೇಳಿದನು.

ಆದರೂ ಪ್ರಹ್ಲಾದನು ತಂದೆಯ ಮಾತನ್ನು ಅಲ್ಲಗಳೆದು, ವಿಷ್ಣು ಭಕ್ತಿಯನ್ನು ಇನ್ನಷ್ಟು ಗಟ್ಟಿಯಾಗಿ ಹಿಡಿದನು. ತಂದೆಯೂ ಗುರುವೂ ಅವನ ಸ್ವಭಾವವನ್ನು ಬದಲಾಯಿಸಲಾರದೇ ಹೋದರು.

ಪ್ರಹ್ಲಾದನು ತನ್ನ ವಂಶಕ್ಕೆ ಕಳಂಕ ಸ್ವರೂಪನಾಗಿ ಹುಟ್ಟಿರುವನೆಂದು ನಿಶ್ಚಯಿಸಿ ಹಿರಣ್ಯಕಶಿಪು ಅವನನ್ನು ಕೊಲ್ಲಿಸಲು ಅನೇಕ ಪ್ರಯತ್ನಗಳನ್ನು ಮಾಡಿದನು. ಬೆಟ್ಟದ ಮೇಲಿನಿಂದ ಉರುಳಿಸಿದನು, ವಿಷ ಸರ್ಪಗಳಿಂದ ಕಡಿಸಿದನು. ಆನೆಗಳಿಂದ ತುಳಿಸಿದನು. ಯಾವುದರಿಂದಲೂ ಪ್ರಹ್ಲಾದನನ್ನು ಕೊಲ್ಲಲಾಗಲಿಲ್ಲ. ಹಿರಣ್ಯಕಶಿಪುವಿನ ನಯಭಯಗಳ ಪ್ರಯತ್ನವೆಲ್ಲಾ ವಿಫಲವಾಯಿತು. ಪ್ರಹ್ಲಾದನು ಸಾಯಲೂ ಇಲ್ಲ, ಹರಿ ಸಂಕೀರ್ತನೆ ಬಿಡಲೂ ಇಲ್ಲ.

ಪ್ರಹ್ಲಾದನಿಂದಲೇ ಆ ಹರಿಯನ್ನು ಬರಮಾಡಿಸಿ ಖಾಡಾ ಖಾಡೀ ಯುದ್ಧದಲ್ಲಿ ಕೊಂದು ತನ್ನ ದೊಡ್ಡತನವನ್ನು ನಿರೂಪಿಸಲು ಸಿದ್ಧನಾಗಿ, ಹಿರಣ್ಯಕಶಿಪು ತನ್ನ ಮಗನನ್ನು ಹಿಡಿದು, "ಆ ನಿನ್ನ ಹರಿ ಎಲ್ಲಿದ್ದಾನೆ?" ಎಂದು ಕೇಳಿದನು.

"ಎಲ್ಲಾ ಕಡೆಯಲ್ಲಿಯೂ ಇದ್ದಾನೆ" ಎಂದನು ಪ್ರಹ್ಲಾದ. "ಈ ಕಂಬದಲ್ಲಿರುವನೇನು?" ಎನ್ನುತ್ತಾ ಹಿರಣ್ಯಕಶಿಪು ತನ್ನ ಕೈಯಲ್ಲಿದ್ದ ಗದೆಯಿಂದ ಕಂಬವನ್ನು ಹೊಡೆದನು. ಕೂಡಲೇ ಕಂಬವು ಎರಡು ಭಾಗವಾಗಿ ಅದರೊಳಗಿನಿಂದ ನರಸಿಂಹಮೂರ್ತಿ ಹಾರಿ ಬಂದು, ಬ್ರಹ್ಮನು ಕೊಟ್ಟ ವರಗಳಿಗೆ ವಿಘಾತವಾಗದಂತೆ ಹಿರಣ್ಯಕಶಿಪುವನ್ನು ತೊಡೆಯ ಮೇಲಕ್ಕೆಳೆದು ಸೀಳಿ ಕೊಂದುಬಿಟ್ಟನು.






ಪೂರ್ವಕಾಲದಲ್ಲಿ ನೇಪಾಳ ದೇಶಕ್ಕೆ ಸಮೀಪದಲ್ಲಿ ಶಾಕ್ಯರಾಜ್ಯವಿದ್ದಿತು. ಕಪಿಲವಸ್ತು ನಗರವೆಂಬುದು ಶಾಕ್ಯರಾಜರ ರಾಜಧಾನಿಯಾಗಿತ್ತು. ಈ ಶಾಕ್ಯರು ಆ ಕಾಲದ ಕೋಸಲ ದೇಶದ ರಾಜನಾದ ಪ್ರಸೇನ-ಜಿತ್ತು ಮಹಾರಾಜನಿಗೆ ತಲೆಬಗ್ಗಿಸಿಕೊಂಡಿರುವವರು. ಹಾಗೆ ಅವರು ತಲೆಬಗ್ಗಿಸಿಕೊಂಡಿದ್ದರೂ ವಂಶಗೌರವ ಪಾಲಿಸುವುದರಲ್ಲಿ ತುಂಬ ಎಚ್ಚರಿಕೆಯಿಂದಲೂ ಕಟ್ಟುನಿಟ್ಟಿನಿಂದಲೂ ಇದ್ದರು. ಆದುದರಿಂದ ಅವರು ಇತರ ಜಾತಿಗಳೊಂದಿಗೆ ವಿವಾಹ ಸಂಬಂಧಗಳನ್ನು ಇಟ್ಟುಕೊಳ್ಳುತ್ತಿದ್ದಿಲ್ಲ.

ಕೋಸಲದ ಮಹಾರಾಜನಿಗೆ ಬುದ್ಧಭಗವಾನನ ಮೇಲೆ ಅಪರಿಮಿತವಾದ ಭಕ್ತಿಯಿದ್ದಿತು. ಬುದ್ಧನು ಶಾಕ್ಯವಂಶದಲ್ಲಿ ಹುಟ್ಟಿದವನಾದುದರಿಂದ ಬುದ್ಧ ಭಗವಾನನೊಂದಿಗೆ ನಿಕಟ ಸಂಬಂಧವನ್ನಿಟ್ಟುಕೊಳ್ಳ ಬೇಕೆಂಬ ಉತ್ಕಟಾಪೇಕ್ಷೆಯಿಂದ, ಶಾಕ್ಯ ವಂಶದ ಸ್ತ್ರೀಯನ್ನೇ ತನ್ನ ಪಟ್ಟದರಾಣಿಯಾಗಿ ಮಾಡಿಕೊಳ್ಳ ಬೇಕೆಂದು ಕೋಸಲರಾಜ ಪ್ರಸೇನಜಿತ್ತು ನಿಶ್ಚಯಿಸಿ ಕೊಂಡನು. ಚಕ್ರವರ್ತಿಯ ನಿಶ್ಚಯವು ಅಮಲಾಗಲು ಎಷ್ಟು ಹೊತ್ತು? ಅವನು ತನ್ನ ನಿಶ್ಚಯವನ್ನು ದೂತರ ಮೂಲಕ ಶಾಕ್ಯರಿಗೆ ತಿಳಿಯಪಡಿಸಿ ತನಗೆ ಯೋಗ್ಯಳಾದ ಕನ್ಯೆಯನ್ನು ದಾನಮಾಡಬೇಕೆಂದು ಕೇಳಿಕೊಂಡನು.

ಇದನ್ನು ಕೇಳಿ ಶಾಕ್ಯರಿಗೆ ದೊಡ್ಡ ಸಮಸ್ಯೆಯೇ ಮೈಮೇಲೆ ಬಿದ್ದ ಹಾಗಾಯಿತು. ಕೋಸಲರಾಜನ ಇಷ್ಟಪ್ರಕಾರ ಮಾಡದೆ ಹೋದರೆ ಅವನಿಂದ ತಮಗೆ ಸರ್ವನಾಶವಾಗುವುದು ಖಂಡಿತ. ಅದರಂತೆ ಒಪ್ಪಿ ಮಾಡೋಣವೆಂದರೆ ತಮ್ಮ ಸಂಪ್ರದಾಯಕ್ಕೆ ವಿರುದ್ಧವಾಗುತ್ತದೆ. ಈ ಸಮಸ್ಯೆಗೆ ಏನು ಮಾಡೋಣವೆಂದು ಅವರು ಸಭೆ ಸೇರಿಸಿ ವಾದೋಪ ವಾದಗಳನ್ನೂ ತುಂಬ ಮಾಡಿದರು.

ಆಗ ಮಹಾನಾಮನೆಂಬವನು "ಅಯ್ಯಾ, ನೀವೇನೂ ಚಿಂತಿಸಬೇಕಾಗಿಲ್ಲ. ನಾನು ಹೇಳಿದಂತೆ ಮಾಡಿಬಿಡುವ. ನನ್ನ ಮಗಳಾದ ವಾಸವ ಕ್ಷತ್ರಿಯಳು ದಾಸಿಯ ಹೊಟ್ಟೆಯಲ್ಲಿ ಹುಟ್ಟಿದವಳು. ತುಂಬಾ ಸೌಂದರ್ಯದಿಂದ ಲಕ್ಷಣವಾಗಿದ್ದಾಳೆ. ಅವಳು ಶಾಕ್ಯ ಯುವತಿ ಎಂದು ಹೇಳಿ ಕೋಸಲ ರಾಜನಿಗೆ ಮದುವೆ ಮಾಡಲು ಕಳುಹಿಸಿಬಿಡೋಣ. ಅವನೇನೂ ಸಂದೇಹ ಪಡಲಾರನು." ಎಂದು ಹೇಳಿದನು. ಈ ಉಪಾಯಕ್ಕೆ




ಎಲ್ಲರೂ ಒಪ್ಪಿದರು. ಗುಡ್ಡದಂತೆ ಬೀಳುವಂಥಾದ್ದು, ಹತ್ತಿಯಂತೆ ಹಾರಿಹೋದಂತೆ ಎಲ್ಲರಿಗೂ ತೋರಿತು.

ಮಹಾನಾಮನು ಕೋಸಲ ರಾಜ್ಯದ ದೂತರನ್ನು ಕರೆದು, "ನಾವು ಮಹಾ ರಾಜರಿಗೆ ಕನ್ಯಾದಾನ ಮಾಡುತ್ತೇವೆ. ನೀವು ವಾಸವ ಕ್ಷತ್ರಿಯಳೆಂಬ ಈ ಹುಡುಗಿಯನ್ನು ನಿಮ್ಮ ದೇಶಕ್ಕೆ ಕರೆದುಕೊಂಡು ಹೋಗಬಹುದು. ನಾವು ಮುಖ್ಯರಾದ ಕೆಲವರು ಬಂದು ಮದುವೆ ಮಾಡಿಕೊಡುತ್ತೇವೆ" ಎಂದನು.

ಆದರೆ ವಂಶದ ಮರ್ಯಾದೆ ಕಾಯುವುದರಲ್ಲಿ ಶಾಕ್ಯರು ತುಂಬಾ ಹಟವುಳ್ಳವರೆಂದು ಆ ದೂತರಿಗೆ ಗೊತ್ತಿತ್ತು. ಈಗ ಅವರು ಇಷ್ಟು ಸುಲಭವಾಗಿ ಒಪ್ಪುವುದನ್ನು ನೋಡಿ ಅವರಿಗೆ ಸಂದೇಹವಾಯಿತು. 'ಇವಳು ಶಾಕ್ಯ ಕನ್ಯೆಯಾಗಿರಲಿಕ್ಕಿಲ್ಲ. ಇವರೇನೋ ಮೋಸಮಾಡುತ್ತಾರೆ' ಎಂದು ತಮ್ಮೊಳಗೆ ತಾವು ಮಾತಾಡಿಕೊಂಡು, "ಹಾಗಾದರೆ, ಈ ಹುಡುಗಿಯೊಂದಿಗೆ ಒಂದೇ ತಟ್ಟೆಯಲ್ಲಿ ನೀವೂ ಊಟಮಾಡಿದರೇನೇ ನಾವು ಕರೆದುಕೊಂಡು ಹೋಗುತ್ತೇವೆ. ಇಲ್ಲದಿದ್ದರೆ ಇಲ್ಲ" ಎಂದು ದೂತರು ಪರೀಕ್ಷೆ ಇಟ್ಟರು.

ಶಾಕ್ಯರಿಗೆ ಮತ್ತೆ ಸಮಸ್ಯೆಗಿಟ್ಟಿತು. ಸ್ವಲ್ಪ ದೂರದಲ್ಲೇ ದೂತರು ಕುಳಿತು ನೋಡುತ್ತಿದ್ದರು. ಮಹಾನಾಮನು ಒಬ್ಬಳು ದಾಸಿಯನ್ನು ಕರೆದು, "ಹುಡುಗಿಯನ್ನು ಕರೆದುಕೊಂಡು ಬಾ. ಅವಳೂ ನನ್ನೊಂದಿಗೆ ಊಟಮಾಡುತ್ತಾಳೆ" ಎಂದನು. ನಿಮಿಷಮಾತ್ರದಲ್ಲಿ ವಾಸವ ಕ್ಷತ್ರಿಯಳು ಬಂದು ತಂದೆಯೊಂದಿಗೆ ಅವನ ತಟ್ಟೆಯ ಮುಂದೆ ಕುಳಿತಳು. ಮಹಾನಾಮನು ಒಂದು ತುತ್ತನ್ನು ಬಾಯಿಗಿಟ್ಟುಕೊಂಡನು. ವಾಸವ ಕ್ಷತ್ರಿಯಳೂ ಅವನ ತಟ್ಟೆಗೆ ಕೈಹಾಕಿದಳು. ಮಹಾನಾಮನು ಎರಡನೇ ತುತ್ತನ್ನು ತೆಗೆಯಲು ಕೈಯನ್ನು ಕೆಳಗಿಳಿಸಿದನು.

ಅಷ್ಟರಲ್ಲಿ ಒಬ್ಬ ಭಟನು ಬಂದು ಒಂದು ಕಾಗದವನ್ನು ತೋರಿಸಿ, "ಪ್ರಭುಗಳೇ! ಅವಂತಿ ರಾಜರು ಈ ಕಾಗದವನ್ನು ಕಳುಹಿಸಿದರು. ತತ್‌ಕ್ಷಣವೇ ಪ್ರತ್ಯುತ್ತರ ತರಲು ಆಜ್ಞೆಯಾಗಿದೆ" ಎಂದು ಹೇಳಿದನು.

ಮಹಾನಾಮನ ಬಲಗೈ ತಟ್ಟೆಯಲ್ಲೇ ಇದ್ದಿತು. ಎಡಗೈಯಲ್ಲಿ ಕಾಗದ ಹಿಡಿದುಕೊಂಡು ಓದುತ್ತ, "ನೀನು ಉಣ್ಣುತ್ತಾ ಇರಮ್ಮ" ಎಂದನು. ವಾಸವ ಕ್ಷತ್ರಿಯಳು ಕೈಬಾಯಿಯ ಕೆಲಸಮಾಡಿಕೊಂಡೇ ಇದ್ದಳು. ಅವನು ಕಾಗದದಲ್ಲೇ ಲಯಿಸಿಕೊಂಡು ಓದುತ್ತಿದ್ದಾನೆ. ಮಗಳ ಊಟವಾದ ಕೂಡಲೇ ತಂದೆಯೂ ಮಗಳೂ ಎದ್ದು ಕೈತೊಳೆದುಕೊಂಡರು.

ಕೋಸಲರಾಜನ ದೂತರು ಇದರಲ್ಲಿ ಅಡಗಿದ ಸೂಕ್ಷ್ಮಗಳನ್ನು ತಿಳಿಯಲಾರದೆ ಹೋದರು. ವಾಸವ ಕ್ಷತ್ರಿಯಳು ಮಹಾನಾಮನ ಸ್ವಂತ ಮಗಳೆಂದೇ

ನಂಬಿದರು. ಶಾಕ್ಯರಿಗೆ ಬಹಳ ಸಂತೋಷವಾಯಿತು. ಮಹಾನಾಮನು ಬಹು ವೈಭವದಿಂದ ತನ್ನ ಕುಮಾರಿಯನ್ನು ಕೋಸಲ ದೇಶಕ್ಕೆ ಕಳುಹಿಸಿಕೊಟ್ಟನು.

ಕೋಸಲರಾಜನು ಅತ್ಯಂತ ಸಂತೃಪ್ತನಾಗಿ ವಾಸವ ಕ್ಷತ್ರಿಯಳನ್ನು ಪಟ್ಟದ ರಾಣಿಯಾಗಿ ಮಾಡಿಕೊಂಡನು. ಆಮೇಲೆ ವಾಸವ ಕ್ಷತ್ರಿಯಳು ಸುಂದರನಾದ ಪುತ್ರನನ್ನು ಹಡೆದು ತಾಯಿಯಾದಳು. ಆ ಪುತ್ರನ ಹೆಸರು ವಿರೂಢವ.

ವಿರೂಢವ ಕುಮಾರನು ಬೆಳೆಯುತ್ತ ದೊಡ್ಡವನಾದನು. ಒಂದುದಿನ ಅವನು ತಾಯಿಯ ಬಳಿಗೆ ಬಂದು, "ಅಮ್ಮಾ, ಹುಡುಗರೆಲ್ಲಾ ತಾತನ ಮನೆಗೆ ಹೋಗುತ್ತಾರಂತೆ. ನಾನೂ ನಮ್ಮ ತಾತನ ಮನೆಗೆ ಹೋಗಿಬರುತ್ತೇನೆ" ಎಂದನು ಅತ್ಯುತ್ಸಾಹದಿಂದ.

ಮಗನ ಮಾತು ಕೇಳಿ ವಾಸವ ಕ್ಷತ್ರಿಯಳ ತಲೆಗೆ ಸಿಡಿಲುಬಿದ್ದ ಹಾಗಾಯಿತು. ಬೇಡಬೇಡವೆಂದು ಅನೇಕ ವಿಧವಾಗಿ ಹೇಳಿ ನೋಡಿದಳು. ಆದರೆ ಬೇಡವೆಂದಷ್ಟೂ ವಿರೂಢವನ ಹಠ ಹೆಚ್ಚೇ ಆಯಿತು.

ಕಡೆಗೆ ಅವಳು ಮಗನ ಪ್ರಯಾಣಕ್ಕೆ ಅನುಮತಿ ಕೊಟ್ಟು, ರಹಸ್ಯವಾಗಿ ತನ್ನ ತಂದೆಗೆ ಒಂದು ಪತ್ರ ಬರೆದಳು. "ನಿಮ್ಮ ಮೊಮ್ಮಗನು ಕಪಿಲವಸ್ತುವಿಗೆ ಬರುತ್ತಾನೆ. ಅವನನ್ನು ತಡೆಯಲು ನನ್ನಿಂದ ಸಾಧ್ಯವಾಗದೆ ಹೋಯಿತು. ಅವನಿಗೆ ಈ ರಹಸ್ಯ ಗೊತ್ತಾಗದಂತೆ ಉಪಾಯವಾಗಿ ನಡೆದುಕೊಳ್ಳಿ" 'ಎಂದು ಕಾಗದದಲ್ಲಿ ಸೂಚಿಸಿದ್ದಳು.

ವಿರೂಢವನು ಬರುವನೆಂದು ತಿಳಿದ ಕೂಡಲೇ ಕಪಿಲವಸ್ತು ನಗರದೊಳಗಿನ ಶಾಕ್ಯರು ತಮ್ಮ ತಮ್ಮ ಪ್ರಾಯ ಬಂದ ಮಕ್ಕಳನ್ನೆಲ್ಲಾ ಸಮೀಪದ ಹಳ್ಳಿ ಊರುಗಳಿಗೆ ಕಳುಹಿಸಿಬಿಟ್ಟರು. ಏಕೆಂದರೆ ದಾಸಿಯ ವಂಶದಲ್ಲಿ ಹುಟ್ಟಿದ ಪುರೂಢವನಿಗೆ ಶಾಕ್ಯರಾರೂ ನಮಸ್ಕಾರ ಮಾಡಬಾರದೆಂಬುದು ಅವರ ಹಠ, ಅಭಿಮಾನ.



ವಿರೂಢವನು ಕಪಿಲವಸ್ತು ನಗರವನ್ನು ತಲಪಿದನು. ಅವನನ್ನು ಸ್ವಾಗತಮಾಡಲು ಶಾಕ್ಯರೆಲ್ಲರೂ ಒಂದುಗೂಡಿ ಸಭೆ ಸೇರಿಸಿದರು. ಅಲ್ಲಿ ಎಲ್ಲರನ್ನೂ ಕ್ರಮವಾಗಿ ರಾಜಕುಮಾರನಿಗೆ ಪರಿಚಯ ಮಾಡಿಸಿದರು. ಪರಿಚಯಿಸಲ್ಪಟ್ಟ ಪ್ರತಿಯೊಬ್ಬರಿಗೂ ವಿರೂಢವನು ನಮಸ್ಕಾರಮಾಡಿದನು. ಆದರೆ ಶಾಕ್ಯರಲ್ಲಿ ಒಬ್ಬನಾದರೂ ಅವನಿಗೆ ತಿರುಗಿ ನಮಸ್ಕಾರ ಮಾಡಲಿಲ್ಲ. ಬರೀ ತಲೆಯಾಡಿಸಿದರು ಅಷ್ಟೇ. ವಿರೂಢವನಿಗೆ ಇದು ಬಹಳ ಆಶ್ಚರ್ಯವಾಗಿದ್ದಿತು. ಅವನಿಗೆ ಶಾಕ್ಯರು ಬಹು ಜಾಗರೂಕತೆಯಿಂದ ಪ್ರತ್ಯೇಕ ಬಿಡದಿಯನ್ನೂ, ಭೋಜನವನ್ನೂ ಏರ್ಪಡಿಸಿದ್ದರು.

ವಿರೂಢವನು ಅಲ್ಲಿ ಕೆಲವು ದಿನಗಳಿದ್ದು ಮತ್ತೆ ತನ್ನ ನಗರಕ್ಕೆ ಹಿಂದಿರುಗಿದನು. ಅವನೊಂದಿಗೆ ಬಂದ ಸೈನಿಕರಲ್ಲಿ ಒಬ್ಬನು ಬಿಡದಿಯಲ್ಲಿ ಏನೋ ಒಂದು ವಸ್ತುವನ್ನು ಮರೆತುದರಿಂದ ಮತ್ತೆ

ಹಿಂದಿರುಗಿ ಬಂದನು. ಆಗ ಅಲ್ಲಿ ನಡೆಯುವ ಒಂದು ಅದ್ಭುತ ದೃಶ್ಯವು ಅವನ ಕಣ್ಣಿಗೆ ಬಿದ್ದಿತು. ವಿರೂಢಕನು ಕುಳಿತ, ಮಲಗಿದ, ತಿರುಗಾಡಿದ ಸ್ಥಳವನ್ನೆಲ್ಲಾ ಒಬ್ಬಳು ದಾಸಿ ಹಾಲಿನಿಂದ ತೊಳೆದು ಶುದ್ಧಪಡಿಸುತ್ತಾ, ಬಾಯಿಯಿಂದ ಏನೋ ಮಂತ್ರದ ಹಾಗೆ ಗೊಣಗಿಕೊಳ್ಳುತ್ತಿದ್ದಳು. ಅದು ಏನೆಂಬುದು ಅವನಿಗೆ ಅರ್ಥವಾಗಲಿಲ್ಲ,

ಸೈನಿಕನು ಅವಳನ್ನು ಮಾತಾಡಿಸಿ ನಿಜ ಸಂಗತಿಯನ್ನು ತಿಳಿದುಕೊಂಡನು. ತಾನು ತಿಳಿದುದನ್ನು ಇತರ ಸೈನಿಕರೊಂದಿಗೂ ಹೇಳಿದನು. ಮತ್ತೇನು ? ಕಲ್ಲೋಲವು ಪ್ರಾರಂಭವಾಯಿತು. ಹೋಗಿಹೋಗಿ ಈ ಸಂಗತಿ ವಿರೂಢಕನ ಕಿವಿಗೂ ಬಿದ್ದಿತು. ಆಗ ಅವನಿಗೆ ಬಂದ ಕೋಪಕ್ಕೆ ಮೇರೆ ಇರಲಿಲ್ಲ. "ನಾನು ಕುಳಿತ ಸ್ಥಳವನ್ನು ಹಾಲಿನಿಂದ ತೊಳೆದು ಶುದ್ಧಿ ಮಾಡಿದರೇನು ಆ ಶಾಕ್ಯರು ? ಅದು ಸಾಲದು. ನಾನು ರಾಜನಾಗಿ ಆ ಸ್ಥಳವನ್ನು ಶಾಕ್ಯರ ಕಂಠ ರಕ್ತದಿಂದಲೇ ಶುದ್ಧಮಾಡುತ್ತೇನೆ. ಆಗ ಹೊರತು ಅದು ಪವಿತ್ರವಾಗಲಾರದು..." ಎಂದು ಪ್ರತಿಜ್ಞೆ ಮಾಡಿಕೊಂಡನು ವಿರೂಢಕ.

ವಿರೂಢಕನು ಕೋಸಲ ದೇಶವನ್ನು ತಲಪಿದ ಕೂಡಲೇ ಈ ಸಮಾಚಾರವೆಲ್ಲವೂ ಪ್ರಸೇನಜಿತ್ತು ಮಹಾರಾಜನಿಗೆ ತಿಳಿಯಿತು. ಅವನೂ ಅತ್ಯುಗ್ರನಾದನು. ಆದರೆ ಸಹನೆಯನ್ನು ತಂದುಕೊಂಡು, ತನ್ನ ಗುರುದೇವನಾದ ಬುದ್ಧಭಗವಾನನಿಗೆ ಅಪಚಾರ ಮಾಡಿದಂತೆ ಆಗುವುದೆಂಬ ಉದ್ದೇಶದಲ್ಲಿ ಶಾಕ್ಯರಿಗೆ ಹಾನಿಮಾಡಬೇಡವೆಂದು ಮಗನಿಗೆ ತುಂಬಾ ತಿಳಿಸಿ ಹೇಳಿದನು.

ಆದರೆ ವಿರೂಢಕನು ತಂದೆಗೆ ಇದಿರು ತಿರುಗಿದನು. ಅವನು ಕೋಸಲ ರಾಜ್ಯದ ಸಿಂಹಾಸನವನ್ನು ಏರಿದ ಕೂಡಲೇ ಮೊದಲು ಶಾಕ್ಯರ ನಾಶಕ್ಕಾಗಿ ಸಂಕಲ್ಪಿಸಿದನು. ತಾಯಿಯಾದ ವಾಸವ ಕ್ಷತ್ರಿಯಳು ಬೇಡಬೇಡವೆಂದು ಕಣ್ಣೀರ್ಗರೆದು ಬೇಡಿಕೊಂಡರೂ ವಿರೂಢಕನು ಕೇಳಲಿಲ್ಲ.

ಅವನು ದೊಡ್ಡ ಸೈನ್ಯದೊಂದಿಗೆ ಹೋಗಿ ಶಾಕ್ಯರನ್ನು ಇದಿರಿಸಿದನು. ಈ ದಾಳಿಯನ್ನು ತಾಳಿಕೊಳ್ಳಲು ಅವರಿಂಗಾದಲಿಲ್ಲ. ವಿರೂಢಕನು ಸ್ವಲ್ಪ ಕೂಡಾ ದಯೆದಾಕ್ಷಿಣ್ಯಗಳಿಲ್ಲದೆ ಶಾಕ್ಯರೆಲ್ಲರನ್ನೂ ಕಡಿದುಹಾಕಿ ರಕ್ತದ ಪ್ರವಾಹವನ್ನೇ ಹರಿಸಿದನು. ಆ ನೆತ್ತರಿನಿಂದಲೇ ತಾನು ಈ ಮೊದಲು ಕುಳಿತಿದ್ದ ಸ್ಥಳವನ್ನು ತೊಳೆದುಹಾಕಿದನು. ಈ ವಿಧವಾಗಿ ವಿರೂಢಕನು ತನ್ನ ಹಗೆಯನ್ನು ತೀರಿಸಿಕೊಂಡನು. ಶಾಕ್ಯಕುಲವೂ ಶಾಕ್ಯರಾಜ್ಯವೂ ಪೂರ್ತಿ ನಾಶವಾಗಿ ಹೋಯಿತು.



# ಬುದ್ಧಿಗೆ ಹೊಡೆತ

**ಸು**ಬ್ಬಯ್ಯ ನೆಂಬ ಸಾಹುಕಾರನೊಬ್ಬನಿದ್ದ. ಅವನ ಹತ್ತಿರ ಊರಿನೊಳಗಿನವರು ಯಾರೂ ಕೆಲಸ ಮಾಡುತ್ತಿದ್ದಿಲ್ಲ. ಏಕೆಂದರೆ, ಅವನು ಏನೋ ಒಂದು ನೆಪವೊಡ್ಡಿ ಆಳುಗಳ ಸಂಬಳವನ್ನು ಲಪಟಾಯಿಸಿಬಿಡುವ ಸಂಗತಿ ಎಲ್ಲರಿಗೂ ಗೊತ್ತಾಗಿ ಹೋಗಿತ್ತು.

ಒಂದು ದಿನ ಯಾವುದೋ ಬೇರೆ ಊರಿನವನಾದ ವೀರಭದ್ರ ನೆಂಬವನು ಸುಬ್ಬಯ್ಯನ ಹತ್ತಿರ ಕೆಲಸಕ್ಕೆ ಸೇರಿದನು. ತಾನು ಹೇಳಿದ್ದನ್ನೆಲ್ಲಾ ಮಾಡದೇ ಹೋದರೆ ಸಂಬಳ ಕೊಡಲಾರೆನೆಂದು ಸುಬ್ಬಯ್ಯನು ವೀರಭದ್ರನಿಗೆ ಮೊದಲೇ ತಿಳಿಸಿ ಬಿಟ್ಟಿದ್ದನು. ವೀರಭದ್ರನು ಅದಕ್ಕೆ ಒಪ್ಪಿಕೊಂಡು ಸುಬ್ಬಯ್ಯ ಹೇಳಿದ ಪ್ರತಿ ಕೆಲಸವನ್ನೂ ಮಾಡುತ್ತಿದ್ದನು. ಒಂದು ತಿಂಗಳು ತುಂಬಿದ ಮೇಲೆ ವೀರಭದ್ರನು ತನ್ನ ಸಂಬಳ ಕೇಳಿದನು.

" ಈ ಒಂದು ಕೆಲಸ ಮಾಡು. ಸಂಬಳ ಕೊಡುತ್ತೇನೆ " ಎಂದು ಸುಬ್ಬಯ್ಯ ಎರಡು ಗಾಜಿನ ಲೋಟಗಳನ್ನು ವೀರಭದ್ರನಿಗೆ ಕೊಟ್ಟು ಚಿಕ್ಕ ಲೋಟದೊಳಗೆ ದೊಡ್ಡದನ್ನಿಡಲು ಹೇಳಿದನು. ತನ್ನ ಸಂಬಳ ಎತ್ತಿ ಹಾಕಲಿಕ್ಕಾಗಿಯೇ ಈ ಉಪಾಯವೆಂದು ವೀರಭದ್ರನು ತಿಳಿದು, ದೊಡ್ಡ ಲೋಟೆಯನ್ನು ಒಡೆದು ಪುಡಿ ಮಾಡಿ, ಆ ತುಂಡುಗಳನ್ನು ಲೋಟೆಗೆ ಹಾಕಿ ಯಜಮಾನನಿಗೆ ತೋರಿಸಿ, ತನ್ನ ಸಂಬಳ ಕೇಳಿದನು.

ಸುಬ್ಬಯ್ಯ ಸಂಬಳ ಕೊಡುವುದನ್ನು ಬಿಟ್ಟು, ಒಡೆದ ಲೋಟದ ಬೆಲೆಯನ್ನೂ ಕೊಡಬೇಕೆಂದು ಹೇಳಿದನು. ವೀರಭದ್ರನು ನ್ಯಾಯಾಧಿಕಾರಿಯ ಬಳಿಗೆ ಹೋಗಿ ಸುಬ್ಬಯ್ಯನ ಮೇಲೆ ಫಿರ್ಯಾದಿ ಮಾಡಿದನು.

"ನೀನು ದೊಡ್ಡ ಲೋಟೆಯನ್ನು ಒಡೆಯದೆಯೇ ಚಿಕ್ಕ ಲೋಟದೊಳಗಿಡಲು ಹೇಳಲಿಲ್ಲ. ನೀನು ಹೇಳಿದ ಕೆಲಸ ಮಾಡಬೇಕಾದರೆ, ವೀರಭದ್ರನು ಮಾಡಿದ ಹಾಗೆಯೇ ಮಾಡಬೇಕಲ್ಲದೆ ಬೇರೆ ದಾರಿ ಇಲ್ಲ" ಎಂದು ನ್ಯಾಯಾಧಿಕಾರಿ ವೀರಭದ್ರನಿಗೆ ಸುಬ್ಬಯ್ಯನಿಂದ ಪೂರ್ತಿ ಸಂಬಳವನ್ನು ಕೊಡಿಸಿದನು.





# ಅವನೇ ಇವನು!

ಒಂದು ಊರಿನಲ್ಲಿ ಆನಂದನೆಂಬವನು ಬೆಳೆದು ಮೀಸೆ ಮೂಡಿದ ಯುವಕನಾದರೂ, ಯಾವ ಬಾಧ್ಯತೆಯನ್ನೂ ಹಚ್ಚಿಕೊಳ್ಳದೆ ಸುಮ್ಮನೆ ತಿರುಗಾಡುತ್ತಿದ್ದನು. ತಂದೆಯ ಬುದ್ಧಿ ಮಾತುಗಳನ್ನು ಲಕ್ಷಿಸಲಿಲ್ಲ. ಒಂದು ದಿನ ತಂದೆ ತುಂಬ ಕಠಿಣವಾಗಿ ಬೈದು ಹೀಯ್ಯಾಳಿಸಿದನು. ಆ ದಿನ ರಾತ್ರಿ ಆನಂದನು ಮನೆಯೊಳಗಿಂದ ಸ್ವಲ್ಪ ಹಣವನ್ನು ಕದ್ದುಕೊಂಡು ಓಡಿಹೋದನು. ಊರೂರು ತಿರುಗುತ್ತ ಸ್ವಲ್ಪ ಕಾಲದ ಮೇಲೆ ಕಾಶೀ ಪಟ್ಟಣವನ್ನು ಮುಟ್ಟಿದನು.

ಅವನು ಕಾಶೀ ಪಟ್ಟಣದಲ್ಲಿಯ ವಿಚಿತ್ರ ವಿಶೇಷಗಳನ್ನು ನೋಡುತ್ತಾ ತಿರುಗುವಾಗ, ಒಂದು ಕಡೆಯಲ್ಲಿ ತನ್ನ ಸಲಕರಣೆಗಳನ್ನು ಹರಡಿ ಕುಳಿತಿದ್ದ ಒಬ್ಬ ಮಾಂತ್ರಿಕನನ್ನು ಕಂಡು ನಿಂತನು. ಆನಂದನು ತನ್ನ ಕಡೆಗೇ ನೋಡುತ್ತಿರುವುದನ್ನು ಆ ಮಾಂತ್ರಿಕನು ಗಮನಿಸಿ ಮುಗುಳುನಗು ಸೂಸಿ, "ಚಿಕ್ಕ ದೊರೆಗಳು ದಕ್ಷಿಣ ದೇಶದಿಂದ ಬಂದವರಾಗಿದ್ದೀರಿ. ನನ್ನ ಮಂತ್ರ ವಿದ್ಯೆಗಳನ್ನು ನೋಡುವಿರಾ?" ಎಂದು ಮಾತಾಡಿಸಿ ಒಂದು ಚಿಕ್ಕ ವಿದ್ಯೆಯನ್ನೂ ಮಾಡಿ ತೋರಿಸಿದನು. ಅದನ್ನು ನೋಡಿ ಆನಂದನು ಬಾಯಿ ಬಿಟ್ಟು ಕಣ್ಣಗಲಿಸಿ ನಿಂತುದನ್ನು ನೋಡಿ ಮಾಂತ್ರಿಕನು, "ತಾವು ನನಗೆ ಐದು ರೂಪಾಯಿ ಕೊಡುವಿರಾದರೆ ಈ ವಿದ್ಯೆಯನ್ನು ತಮಗೆ ಹೇಳಿಕೊಡುತ್ತೇನೆ" ಎಂದನು.

ತಾನು ಆ ವಿದ್ಯೆಯನ್ನು ಕಲಿತುಕೊಂಡರೆ, ಎಲ್ಲರೂ ತನ್ನನ್ನು ಗೌರವ ದೃಷ್ಟಿಯಿಂದ ನೋಡುವರೆಂದು ಆನಂದನಿಗೆ ತೋರಿತು. ಅವನು ಮಾಂತ್ರಿಕನಿಗೆ ಐದು ರೂಪಾಯಿ ಕೊಟ್ಟು ಆ ವಿದ್ಯೆಯ ಗುಟ್ಟನ್ನು ತಿಳಿದುಕೊಂಡನು. ಇಂತಹ ವಿದ್ಯೆ ಕೈವಶವಿದ್ದರೆ ಇನ್ನೊಬ್ಬರಿಂದ ಪಂದ್ಯವಿಡಿಸಿ ಹಣ ಸಂಪಾದಿಸಬಹುದೆಂದು ಆನಂದನಿಗೆ ತೋರಿತು.

ಮಾರನೇ ದಿನ ಆನಂದನು ಅದೇ ದಾರಿಯಲ್ಲಿ ಬರುವಾಗ, ಅದೇ ಮಾಂತ್ರಿಕನು ತನ್ನ ಸುತ್ತಲೂ ಸೇರಿದ ಜನರ ಮುಂದೆ ಇನ್ನೊಂದು ವಿದ್ಯೆಯನ್ನು ಮಾಡಿ ತೋರಿಸುತ್ತಿರುವುದನ್ನು ನೋಡಿದನು.

ಎಲ್ಲರೂ ಹೊರಟುಹೋದ ಮೇಲೆ ಆನಂದನು ಮಾಂತ್ರಿಕನಿಗೆ ಹತ್ತು ರೂಪಾಯಿ ಕೊಟ್ಟು ಆ ಹೊಸ ವಿದ್ಯೆಯನ್ನು ಕೂಡಾ ಕಲಿತುಕೊಂಡನು.

ಹೀಗೆ ಆನಂದನು ನೂರು ರೂಪಾಯಿಗಳವರೆಗೂ ಆ ಮಾಂತ್ರಿಕನಿಗೆ ಕೊಟ್ಟು ಕೆಲವಾರು ವಿದ್ಯೆಗಳನ್ನು

ವಿ. ಸತ್ಯನಾರಾಯಣ

ಕಲಿತನು. ಅಷ್ಟರಲ್ಲಿ ಆನಂದನನ್ನು ಅವನ ಊರಿನವರು ಗುರುತು ಹಿಡಿದುಕೊಂಡು, ಮನೆಯಲ್ಲಿ ಹೇಳದೇ ಬಂದುದಕ್ಕೆ ನಿಂದಿಸಿ ಬುದ್ಧಿ ಹೇಳಿ, ತಮ್ಮೊಂದಿಗೆ ಮನೆಗೆ ಕರೆದುಕೊಂಡು ಹೋದರು.

ಮನೆ ಸೇರಿದ ಮೇಲೆ ಆನಂದನು, ತಾನೀಗ ಯಾವುದಕ್ಕೂ ಉಪಯೋಗವಿಲ್ಲದವನಲ್ಲವೆಂಬುದನ್ನು ನಿರೂಪಿಸಲು, ತನ್ನ ಮಾಂತ್ರಿಕ ಸಲಕರಣೆಗಳೊಂದಿಗೆ ಊರ ನಡುವಿನ ದಾರಿಯ ಬದಿಯಲ್ಲಿ ಮೈದಾನದ ಮರದ ಹತ್ತಿರ ಕುಳಿತುಕೊಂಡು ಜನರನ್ನು ಸೇರಿಸಿ ಮಂತ್ರವಿದ್ಯೆ ತೋರಿಸತೊಡಗಿದನು. ತಾನು ಮಾಡಿ ತೋರಿಸಿದ ಹಾಗೆ, ಯಾರಾದರೂ ಮಾಡಿದರೆ ಐವತ್ತು ರೂಪಾಯಿ ಕೊಡುತ್ತೇನೆಂದೂ, ಪ್ರಯತ್ನದಲ್ಲಿ ಸೋತವರು ತನಗೆ ಐದು ರೂಪಾಯಿ ಕೊಡಬೇಕೆಂದೂ ಹೇಳಿದನು. ಒಬ್ಬಿಬ್ಬರು ಅವನ ಹಾಗೆ ವಿದ್ಯೆಗಳನ್ನು ಮಾಡಿ ತೋರಿಸಲಾಗದೆ, ಐದೈದು ರೂಪಾಯಿ ತೆತ್ತು ಹೋಗಿಬಿಟ್ಟರು. ಆಮೇಲೆ ಆ ಊರಿನವರಾರೂ ಆ ಗೊಡವೆಗೆ ಬರಲಿಲ್ಲ. ಯಾವಾಗಲಾದರೂ ಬೇರೆ ಗ್ರಾಮಗಳಿಂದ ಬಂದವರು ಅವನ ಹತ್ತಿರ ಪಂದ್ಯ ಕಟ್ಟಿ ಐದೈದು ರೂಪಾಯಿ ಕಳೆದುಕೊಂಡು ಹೋದರು.

ಅದನ್ನು ನೋಡಿ ಆನಂದನು, ತಾನು ಮಾಡಿ ತೋರಿಸುವ ವಿದ್ಯೆಗಳನ್ನು, ಮಾಡಿ ತೋರಿಸಿದವರಿಗೆ ನೂರು ರೂಪಾಯಿ ಬಹುಮಾನ ಕೊಡುವೆನೆಂದು ಪ್ರಕಟಪಡಿಸಿದನು.

ಒಂದು ದಿನ ಗಡ್ಡ ಮೀಸೆ ಬೆಳೆದ ವೃದ್ಧ ತಾತನೊಬ್ಬನು ಬಂದು ಆನಂದನು ಮಾಡಿದ ವಿದ್ಯೆಗಳನ್ನು ತಾನು ಕೂಡಾ ಮಾಡಿ, ಆನಂದನಿಂದ ನೂರು ರೂಪಾಯಿ ಬಹುಮಾನ ಪಡೆದುಕೊಂಡು ಹೊರಟು ಹೋದನು. ಇದು ಆನಂದನಿಗೆ ಚೇಳು ಕುಟುಕಿದಂತಾಯಿತು. ಆಮೇಲೆ ಅವನು ಆ ಮಂತ್ರವಿದ್ಯೆಗಳ ಕೆಲಸವನ್ನು ಬಿಟ್ಟು, ಮತ್ತೊಂದು ವಿದ್ಯೆಯನ್ನು ಜನರಿಗೆ ತೋರಿಸುತ್ತ, ಹೀಗೆ ಮಾಡಿದವರಿಗೆ ನೂರು ರೂಪಾಯಿ ಕೊಡುವೆನೆಂದೂ, ಮಾಡುವೆನೆಂದು ಹೇಳಿ ಮಾಡಲಾಗದೆ ಹೋದವರು ಐನೂರು



ರೂಪಾಯಿ ತನಗೇ ಕೊಡಬೇಕೆಂದೂ ಹೇಳಿದನು. ಯಾವನೋ ಒಬ್ಬ ಭಿಕ್ಷುಕನು ಅವನ ಬಳಿಗೆ ಬಂದು, ಆ ವಿದ್ಯೆಯನ್ನು ಮಾಡಿ ತೋರಿಸಿ, ನೂರು ರೂಪಾಯಿ ಗೆದ್ದುಕೊಂಡು ಸಂತೋಷದಿಂದ ಹೊರಟು ಹೋದನು.

ಈ ಘಟನೆಯಿಂದ ಆನಂದನಿಗೆ ಅಳುವೇ ಬಂದಿತು. ಹಣ ಹೋದುದು ಹಾಗಿರಲಿ; ಊರವರ ಮುಂದೆ ತನ್ನ ಹೆಸರು ಹಾಳಾಗುತ್ತಿದೆಯಲ್ಲಾ! ತನ್ನ ಕೀರ್ತಿ ಗೇಲಿಗೀಡಾಗುತ್ತಿದೆಯಲ್ಲಾ! ತನ್ನ ಹೊರತು ಬೇರೆ ಯಾರಿಂದಲೂ ಮಾಡಲಾಗದೆಂಬ ವಿದ್ಯೆಗಳನ್ನು ಸಾಮಾನ್ಯ ಮುದುಕರೂ, ಭಿಕ್ಷೆಗಾರರೂ ಮಾಡುತ್ತಾರೆಂದರೆ ಹೇಗಾಗಬೇಡ! ಯಾವ ಪ್ರಯೋಜನಕ್ಕಾಗಿ ಈ ಮಂತ್ರವಿದ್ಯೆಗಳನ್ನು ಕಲಿತನೋ ಆ ಪ್ರಯೋಜನಕ್ಕೇ ಘಾತ ಬಂದಿದೆ.

ಆನಂದನು ಎದ್ದು ಆ ಭಿಕ್ಷುಕನ ಹಿಂದೆಯೇ ಅವನಿಗೆ ತಿಳಿಯದಂತೆ ಹೋದನು. ಬಹಳ ದೂರ ಊರ ಹೊರಗೆ ಹೋದ ಮೇಲೆ ಆನಂದನು ಅವನ ಬಳಿಗೆ ಹೋಗಿ, "ನೋಡಪ್ಪಾ, ನೀನು ಈ ವಿದ್ಯೆಗಳನ್ನು ಕಾಶೀ ಪಟ್ಟಣದಲ್ಲಿ ಕಲಿತೆಯೇನು ?" ಎಂದು ಕೇಳಿದನು.

"ಈ ಅಲ್ಪ ವಿದ್ಯೆಗಾಗಿ ಕಾಶೀವರೆಗೆ ಹೋಗಬೇಕೇನು?" ಎಂದು ಭಿಕ್ಷುಕನು ಕೇಳಿದನು. ಆನಂದನಿಗೆ ಆ ಕಂಠಧ್ವನಿಯ ಗುರುತು ಹತ್ತಿತು. ತನಗೆ ಕಾಶಿಯಲ್ಲಿ ವಿದ್ಯೆಗಳನ್ನು ಕಲಿಸಿಕೊಟ್ಟ ಗುರುವೇ ಈ ಭಿಕ್ಷುಕ. ಮೊನ್ನೆ ಗಡ್ಡ ಮೀಸೆಗಳ ತಾತನಾಗಿ ಬಂದವನು ಇವನೇ ಏನೋ?

"ಯಾರು ನೀನು? ನಿಜ ಹೇಳು!" ಎಂದು ಆನಂದನು ಅವನ ಕುತ್ತಿಗೆಯನ್ನು ಹಿಡಿದುಕೊಂಡನು. ಅವನು ಆನಂದನ ಹಿಡಿತವನ್ನು ಬಿಡಿಸಿಕೊಂಡು, "ನಾನು ಹೊಟ್ಟೆಗೆ ಗತಿಯಿಲ್ಲದ ಪರಿಸ್ಥಿತಿಯಲ್ಲಿ ಭಿಕ್ಷೆ ಎತ್ತಿಕೊಳ್ಳುವ ಸಾಧನವಾಗಿ ಈ ವಿದ್ಯೆಗಳನ್ನು ಕಲಿತುಕೊಂಡೆ. ಆದರೆ ನಿನ್ನಂತಹ ಧನವಂತರಿಗೆ ಈ ವಿದ್ಯೆಗಳು ಹೇಗೆ ಉಪಯೋಗವಾಗುತ್ತವೋ ನೋಡಬೇಕೆಂದು ನಿನ್ನನ್ನು ಅನುಸರಿಸಿಕೊಂಡೇ ಬಂದೆನು. ನಿನ್ನ ಪೂರ್ವೋತ್ತರಗಳನ್ನು ವಿಚಾರಿಸಿ ತಿಳಿದೆನು. ನಿನ್ನ ತಂದೆ ಅಪಾರವಾಗಿ ಧನವನ್ನು ಸಂಪಾದಿಸಿಟ್ಟಿದ್ದಾರೆಂಬುದೆಲ್ಲಾ ನನಗೆ ಗೊತ್ತು. ಅದರಿಂದ ಒಳ್ಳೆಯ ವ್ಯಾಪಾರ ಮಾಡಿಕೊಂಡು ಬದುಕುವುದು ಬಿಟ್ಟು ನಿನಗೆ ಇದೆಂತಹ ಭಿಕಾರಿ ಬುದ್ಧಿಯೋ!" ಎಂದನು ಆ ಮಾಂತ್ರಿಕ.

ಅವನ ಮಾತಿನಿಂದ ಆನಂದನಿಗೆ ಬುದ್ಧಿ ಬಂದು, ಅವನು ತಂದೆಯ ವ್ಯಾಪಾರದಲ್ಲಿ ತಲೆ ಹಾಕಲು ತೊಡಗಿ, ಎಲ್ಲರಂತೆ ಸಮಾಜದಲ್ಲಿ ಗೌರವದಿಂದ ಬದುಕಲು ಕಲಿತನು.



# ತಿರುಗಿ ತಂದ ತಿಮ್ಮ

ರಾಮದಾಸನೆಂಬ ವೈದ್ಯನ ಹತ್ತಿರ ದಾಮೋದರನೆಂಬ ಸ್ನೇಹಿತನು ಸಾವಿರ ರೂಪಾಯಿ ಕೈಗಡ ಪಡೆದುಕೊಂಡು, ಪತ್ರ ಸಾಕ್ಷ್ಯಗಳೇನೂ ಇಲ್ಲದುದರಿಂದ, ರಾಮದಾಸನು ಹಣವನ್ನು ತಿರುಗಿ ಕೇಳಿದಾಗ ತಾನೇನೂ ಅರಿಯೆನೆಂದು ದಬಾಯಿಸಿ ಬಿಟ್ಟನು. ರಾಮದಾಸನು ಈ ಮೋಸವನ್ನು ಹೆಂಡತಿಯೊಡನೆ ಹೇಳಿಕೊಳ್ಳಲು, "ಚಿಂತಿಸಬೇಡೀಂದ್ರೆ, ನಮ್ಮ ಇಷ್ಟ ದೈವ ಹನುಮಂತನೇ ನೋಡಿಕೊಳ್ಳುತ್ತಾನೆ!" ಎಂದು ಸಮಾಧಾನ ಪಡಿಸಿದಳು.

ಇನ್ನು ರಾಮದಾಸನ ಕಾಟವಿಲ್ಲವೆಂದು ಗಟ್ಟಿಯಾದ ಮೇಲೆ ದಾಮೋದರನು ಆ ಸಾವಿರ ರೂಪಾಯಿಗೆ ಚಿನ್ನವನ್ನು ಪಡೆದು, ಆಭರಣ ಮಾಡಿಕೊಡುವಂತೆ ಗೋವಿಂದಾಚಾರಿಗೆ ಕೊಟ್ಟನು. ಗೋವಿಂದಾಚಾರಿ ಆ ಚಿನ್ನವನ್ನು ಲಪಟಾಯಿಸಿ, ಹಿತ್ತಾಳೆಯ ಆಭರಣಕ್ಕೆ ಚಿನ್ನದ ಒಪ್ಪಹಚ್ಚಿ ದಾಮೋದರನಿಗೆ ಕೊಟ್ಟನು. ಬೇಗದಲ್ಲೇ ದಾಮೋದರನು ಮೋಸವನ್ನು ಅರಿತು, ಗೋವಿಂದಾಚಾರಿಯನ್ನು ಕೇಳಲು, "ಈ ಆಭರಣ ನಾನು ಮಾಡಿದ್ದೇ ಅಲ್ಲ" ಎಂದ ಗೋವಿಂದಾಚಾರಿ.

ಗೋವಿಂದಾಚಾರಿ ಮುತ್ತಯ್ಯನ ಹತ್ತಿರ ಒಂದು ಹೊಲ ಕೊಂಡುಕೊಳ್ಳುವ ನಿಮಿತ್ತ ಸಾವಿರ ರೂಪಾಯಿಯನ್ನು ಮುಂಗಡ ಕೊಟ್ಟಿದ್ದನು. ಎರಡು ವಾರಗಳ ನಂತರ ಉಳಿದ ಐನೂರು ರೂಪಾಯಿ ಕೊಡಲು ಹೋದಾಗ, "ಸ್ಥಳದ ಬೆಲೆ ಎರಡೂವರೆ ಸಾವಿರ ವೆಂದೆನಲ್ಲ?" ಎಂದನು ಮುತ್ತಯ್ಯ.

ಈ ಮುತ್ತಯ್ಯ ಬಡ್ಡಿಯ ಲೇವಾದೇವಿ ನಡೆಸುವವನು. ವಿಶ್ವನಾಥ ಎಂಬವನು ಮುತ್ತಯ್ಯನ ಹತ್ತಿರ ಸಾವಿರ ರೂಪಾಯಿ ಸಾಲಪಡೆದು, ಆ ರಾತ್ರಿಯೇ ಊರುಬಿಟ್ಟು ಓಡಿ ಹೋಗುತ್ತಾ ಕಳ್ಳರ ಕೈಗೆ ಸಿಕ್ಕಿ ಆ ಹಣವನ್ನು ಕಳೆದು ಕೊಂಡನು.

ಕಳ್ಳರು ಕಾಡಿನ ಒಂದು ಆಲದ ಮರದ ಪೊಟರೆಯಲ್ಲಿ ಆ ಹಣವನ್ನು ಅಡಗಿಸಿಟ್ಟರು. ರಾಮದಾಸ ವೈದ್ಯನು ಮೂಲಿಕೆಯನ್ನು ಹುಡುಕುತ್ತ ಆ ಕಾಡು ಪ್ರಾಂತಕ್ಕೆ ಬಂದಾಗ, ಒಂದು ಕೋತಿ ಆಲದ ಮರದ ಪೊಟರೆಯಿಂದ ಹಣದ ಮೂಟೆಯನ್ನು ತೆಗೆದು, ಅದರಲ್ಲಿ ತಿನ್ನುವಂತಹುದೇನೂ ಇಲ್ಲದಿರಲು ರಾಮದಾಸನ ಪಕ್ಕದಲ್ಲಿ ಅದನ್ನು ಹಾಕಿತು. ಆ ಮೂಟೆಯಲ್ಲಿ ರಾಮದಾಸನಿಗೆ ಸಾವಿರದ ನೂರಹದಿನಾರು ರೂಪಾಯಿಗಳು ಸಿಕ್ಕಿದುವು. ತನ್ನ ಹೆಂಡತಿಯ ಮಾತನ್ನು ನೆನೆಯುತ್ತ ಮನದಲ್ಲೇ ಹನುಮಂತನಿಗೆ ನಮಿಸಿದನು ರಾಮದಾಸ.





# ಭೂತವೈದ್ಯ

**ಹೊ**ಸಪೇಟೆ ಎಂಬ ಊರಿನಲ್ಲಿ ರಾಜಣ್ಣನೆಂಬವನು ತಿಂಡಿಗಳನ್ನು ಹೊತ್ತುಕೊಂಡು ಹಳ್ಳಿ ಹಳ್ಳಿಗಳಲ್ಲಿ ತಿರುಗಿ ಮಾರಾಟಮಾಡುತ್ತ, ತನ್ನ ಜೀವನವನ್ನು ಸಾಗಿಸಿಕೊಂಡಿದ್ದ. ಅವನದು ಮುಗ್ಧ ಮನಸ್ಸು.

ಹೊಸಪೇಟೆಯ ಆಚೆಯಲ್ಲಿ ಹಳೇಪೇಟೆ ಎಂಬ ಒಂದು ಊರಿದ್ದಿತು. ಅಲ್ಲಿ ವೆಂಕಟಾಚಲನೆಂಬ ಒಬ್ಬ ಮೋಸಗಾರನಿದ್ದ. ಆದರೆ ಅವನನ್ನು ನೋಡಿದವ ರಾರೂ ಮೋಸಗಾರನೆಂದು ಹೇಳಲಾರರು.. ಅವನು ಎಲ್ಲರೊಳಗೆ ದೊಡ್ಡ ಮನುಷ್ಯನಂತೆ ಚಿಲಾಮಣಿಯಾಗುತ್ತ, ಬಹಳ ಅನುಭವಿಯಂತೆ ಸವಿಮಾತುಗಳನ್ನೂ, ಲೋಕಾಭಿರಾಮಾಯಣಗಳನ್ನೂ ಪ್ರವಚಿಸಿಕೊಳ್ಳುತ್ತ ತಿರುಗಾಡುತ್ತಿರುವವನು. ಅವಕಾಶ ದೊರಕಿದಾಗ ಯಾವನೋ ಒಬ್ಬನನ್ನು ಮೋಸಪಡಿಸಿಬಿಡುವವನು.

ಒಂದು ದಿನ ರಾಜಣ್ಣನು ಹೊಸ ಕೊಡೆಯನ್ನು ಕೊಂಡುಕೊಂಡುದನ್ನು, ವೆಂಕಟಾಚಲನು ನೋಡಿದನು. ಮಾರನೇ ದಿನ ಹನಿಹನಿಯಾಗಿ ಮಳೆ ಬೀಳುವ ಸಮಯದಲ್ಲಿ ವೆಂಕಟಾಚಲನು ರಾಜಣ್ಣನ ಮನೆಗೆ ಬಂದು, "ಸ್ವಲ್ಪ ಕೊಡೆಯನ್ನು ಕೊಡಪ್ಪಾ, ಮತ್ತೆ ಕೊಡುತ್ತೇನೆ" ಎಂದನು. ರಾಜಣ್ಣನು ಹೊಸ ಕೊಡೆಯನ್ನು ಕೊಟ್ಟನು. ಆದರೆ ವೆಂಕಟಾಚಲನು ಕೊಡೆಯನ್ನು ತಿರುಗಿ ಕೊಡಲೇ ಇಲ್ಲ.

ಹದಿನೈದು ದಿನಗಳ ಮೇಲೆ ವೆಂಕಟಾಚಲನು ಒಬ್ಬಂಟಿಗನಾಗಿದ್ದಾಗ ರಾಜಣ್ಣನು "ನನ್ನ ಕೊಡೆ ಕೊಡುವಿರಾ ?" ಎಂದು ಕೇಳಿದನು.

"ಅಯ್ಯೋ ! ಅದನ್ನೇನು ಕೇಳುವೆಯಪ್ಪಾ ? ರಾಜಣ್ಣಾ ! ಆ ದಿನ ಕೊಡೆ ತೆಗೆದುಕೊಂಡು ಹೋದರೂ, ತೀರಾ ಒದ್ದೆಮುದ್ದೆಯಾಗಿ ನಡುಗುತ್ತಾ, ಮನೆ ಸೇರಿದೆ. ಏನು ನಡೆಯಿತೆಂದರೆ, ಹೇಳಲಿಕ್ಕೇ ಭಯವಾಗುತ್ತದೆ. ಊರ ಹೊರಗಿನ ಆಲದಮರವಿದೆಯಲ್ಲಾ, ಅಲ್ಲಿವರೆಗೆ ಕೊಡೆ ಹಿಡಿದಿದ್ದೆ. ಅಲ್ಲಿಗೆ ಮುಟ್ಟಿದ್ದೇ ತಡ, ಮರದ ಮೇಲಿದ್ದ ಯಾವುದೋ ದೆವ್ವ ನನ್ನ ಮುಂದೆ ಹಾರಿ ಕೊಡೆಯನ್ನು ಎಳೆದುಕೊಂಡಿತು. 'ಈ ಕೊಡೆ ರಾಜಣ್ಣನದು. ಇದನ್ನು ನೀನು ತೆಗೆದುಕೊಂಡರೆ ಅವನು ಸುಮ್ಮ ನಿರಲಾರ'. ಅಂತ ನಾನು ಹೇಳಿದೆ. 'ಅವನು ನಿನ್ನನ್ನು ಏನಾದರೂ ಕೇಳಿದರೆ ಅವನ ಮಾತನ್ನು ಈ ಮರದ ಪೊಟರೆಯೊಳಗೆ ಊದಿ ಹೋಗಿಬಿಡು.

ಕೆ. ಸದಾನಂದ

ಉಳಿದದ್ದೆಲ್ಲಾ ನಾನು ನೋಡಿಕೊಳ್ಳುತ್ತೇನೆ' ಎಂದು ಹೇಳಿ ಆ ದೆವ್ವ ಕೊಡೆಯೊಂದಿಗೆ ಮರದ ಮೇಲೆ ಹಾರಿಹೋಯಿತು. ಆ ಭಯದಿಂದ ಮನೆಗೆ ಬಂದು ನಾನು ಎಂಟು ಹತ್ತುದಿನ ಹಾಸಿಗೆ ಹಿಡಿದು ಈಗ ತಾನೇ ಎದ್ದಿದ್ದೇನೆ." ಎಂದನು ವೆಂಕಟಾಚಲ.

ರಾಜಣ್ಣನು ದೆವ್ವ ಭೂತಪಿಶಾಚಿಗಳ ಹೆಸರು ಹೇಳಿದರೆ ಗಡಗಡ ನಡುಗುವನು. ಇದೆಲ್ಲಾ ವೆಂಕಟಾಚಲನಿಗೆ ಗೊತ್ತಿತ್ತು. ಅದಕ್ಕೆ ಸರಿಯಾಗಿಯೇ ಮೋಸದ ವಥಕ ಹೂಡಿದ್ದ.

ತನ್ನ ಕೊಡೆಯನ್ನು ದೆವ್ವ ಹಾರಿಸಿಕೊಂಡು ಹೋಯಿತೆಂಬುದನ್ನು ತಿಳಿದು ರಾಜಣ್ಣನು ಹೆದರಿ "ಹೋಗಲಿಬಿಡೀ. ದೆವ್ವ ಎಳೆದುಕೊಂಡಿದ್ದರೆ ನಾನಾ ಥರೂ ಏನುಮಾಡುತ್ತಿದ್ದೆ ?" ಎಂದನು.

ಹೊಸಪೇಟೆಯಲ್ಲಿ ಭೈರವನೆಂಬವನಿಗೆ ಭೂತ ವೈದ್ಯವೂ, ಮಂತ್ರ ತಂತ್ರಗಳೂ ಗೊತ್ತಿದ್ದುವು. ಅವನು ಆಗಾಗ ರಾಜಣ್ಣನಿಂದ ತಿಂಡಿಕೊಂಡು ಕೊಳ್ಳುವು ದುಂಟು. ಮಾತಿನ ಸಂದರ್ಭದಲ್ಲಿ ರಾಜಣ್ಣನು ತನ್ನ ಕೊಡೆಯನ್ನು ದೆವ್ವ ಹಾರಿಸಿಕೊಂಡು ಹೋದ ಸಂಗತಿಯನ್ನು ಭೈರವನೊಂದಿಗೆ ಹೇಳಿದನು.

"ರಾಜಣ್ಣಾ, ಮನುಷ್ಯರಿಗೆ ದೆವ್ವ ಹಿಡಿದರೆ ಓಡಿಸಲು ನನಗೆ ಗೊತ್ತಿದೆ, ಆದರೆ ನಿನ್ನ ಕೊಡೆಯನ್ನು ದೆವ್ವ ಹಾರಿಸಿಕೊಂಡರೆ ಹೇಗೆ ಪಡೆಯುವುದೋ ನನಗೆ ಗೊತ್ತಾಗುವುದಿಲ್ಲ. ಅದೇನಿದ್ದರೂ ಆಲದ ಮರದಲ್ಲಿ ದೆವ್ವವಿರುವುದು ನಿಜವೇ ಆಗಿದ್ದರೆ ಎಂದೋ ಒಂದುದಿನ ನಾನು ಅದಕ್ಕೆ ಬುದ್ಧಿ ಕಲಿಸದೆ ಬಿಡುವುದಿಲ್ಲ" ಎಂದನು ಭೈರವ.

ವೆಂಕಟಾಚಲನ ಮೇಲೆ ಭೈರವನಿಗೆ ತುಂಬ ಕೋಪ ವಿದ್ದಿತು. ಕಾರಣವೇನೆಂದರೆ ದೆವ್ವ ಭೂತಗಳೊಂದೂ ಇಲ್ಲವೆಂದೂ, ಭೈರವನು ಜನರನ್ನು ಮೋಸ ಮಾಡುತ್ತಾನೆಂದೂ ವೆಂಕಟಾಚಲನು ಅಲ್ಲಲ್ಲಿ ಹೇಳುತ್ತಿರುವುದು ಭೈರವನಿಗೆ ಗೊತ್ತಾಗಿತ್ತು.



ಆಮೇಲೆ ಐದಾರು ದಿನಗಳ ನಂತರ ಒಂದು ನಡು ಮಧ್ಯಾಹ್ನದ ವೇಳೆಯಲ್ಲಿ ರಾಜಣ್ಣನು ತಿಂಡಿಗಳನ್ನು ಮಾರುತ್ತ ಒಂದು ಹಳ್ಳಿಯಿಂದ ಇನ್ನೊಂದು ಹಳ್ಳಿಗೆ ನಡೆಯುತ್ತಿದ್ದಾಗ, ಒಂದು ಬಳಸಿನಲ್ಲಿ ಅವನಿಗೆ ವೆಂಕಟಾಚಲನು ಇದಿರಾದನು. ಅವನ ಕೈಯಲ್ಲಿರುವ ಬಿಡಿಸಿದ ಕೊಡೆ ರಾಜಣ್ಣನದೇ !

ರಾಜಣ್ಣ ನಿಂತು, "ಇದು ನನ್ನ ಕೊಡೆಯೇ ಅಲ್ಲವೇನು?" ಎಂದು ಕೇಳಿದನು. "ಹೌದು, ನಿನ್ನದೇ!" ಎಂದನು ವೆಂಕಟಾಚಲ. "ಮತ್ತೆ ದೆವ್ವ ಹಾರಿಸಿಕೊಂಡು ಹೋಯಿತೆಂದಿರಲ್ಲಾ?" ಎಂದ ರಾಜಣ್ಣ.

ವೆಂಕಟಾಚಲನು ದೊಡ್ಡ ಕಣ್ಣುಗಳಿಂದ ಗುಡ್ಡುಗಳನ್ನು ತಿರುಗಿಸುತ್ತಾ ರಾಜಣ್ಣನ ಮುಖ ನೋಡಿ, "ನಾನು ಯಾರೆಂದುಕೊಂಡೆ? ವೆಂಕಟಾಚಲನಿಂದ ಕೊಡೆಯನ್ನು ಎಳೆದುಕೊಂಡ ದೆವ್ವ ನಾನೇ!" ಎಂದು ಹೇಳಿ ಮುಂದಕ್ಕೆ ನಡೆದನು. ಅಷ್ಟು ಕೇಳಿದ್ದೇ ತಡ, ರಾಜಣ್ಣ ಹೆದರಿ ಎದ್ದೆನೋ ಬಿದ್ದೆನೋ ಎಂಬಂತೆ ಓಡ

ತೊಡಗಿದನು. ಸ್ವಲ್ಪ ದೂರ ಓಡಿದಾಗ ಇದಿರಾಗಿ ಬರುವ ಭೂತವೈದ್ಯ ಭೈರವನಿಗೆ ಢಿಃ ಕೊಟ್ಟನು. ಭೈರವನು ಎಲ್ಲಿಯೋ ಮಂತ್ರ ಕಾರ್ಯ ಮಾಡಿ ಹಾಗೆ ಬರುತ್ತಿದ್ದ.

"ಏನಾಯಿತು ರಾಜಣ್ಣಾ? ಹೀಗೆ ಹೆದರುವಿಯಲ್ಲಾ?" ಎಂದು ಭೈರವನು ಅವನನ್ನು ಕೇಳಿದನು.

"ಭೈರವರೇ, ಆಗೊಳ್ಳಿ, ಅಲ್ಲಿ ಕೊಡೆ ಹಿಡಿದುಕೊಂಡು ಹೋಗುವುದು ಯಾರು ಗೊತ್ತಾ? ವೆಂಕಟಾಚಲರಲ್ಲ, ದೆವ್ವ! ಈ ಮಾತು ಅದೇ ಹೇಳಿತು. ಕೊಡೆಯೂ ನನ್ನದೇ ಅಂತೆ!" ಎಂದನು ರಾಜಣ್ಣ ನಡುಗುತ್ತ. "ಹಾಗೇನು ಕಥೆ?" ಎಂದು ಭೈರವನು ಬೇವಿನ ಚತ್ತವನ್ನು ಮುರಿದುಕೊಂಡು, "ಏಯ್! ಆಲದ ದೆವ್ವಾ! ನಿಲ್ಲಲ್ಲಿ! ಓಂ, ಹ್ರಾಂ..." ಎಂದು ಕೂಗುತ್ತ ವೆಂಕಟಾಚಲನ ಕಡೆಗೆ ಓಡಿದನು.

ವೆಂಕಟಾಚಲನು ಹಿಂದಿರುಗಿ ನೋಡಿ, ಹೆದರಿ ಓಡಲು ತೊಡಗಿದನು. "ಅದು ದೆವ್ವ! ಓಡಲು ಬಿಡಬೇಡಿ! ಹಿಡೀರಿ!" ಎಂದು ಭೈರವನು ಕೂಗಲು, ಹೊಲಗದ್ದೆಗಳಲ್ಲಿ ಕೆಲಸ ಮಾಡುವವರೆಲ್ಲ ಓಡಿ ಬಂದು ವೆಂಕಟಾಚಲನನ್ನು ಹಿಡಿದರು.

ಅಷ್ಟರಲ್ಲಿ ಭೈರವನು ಬಂದು, ವೆಂಕಟಾಚಲನನ್ನು ಮಂತ್ರಪೂರ್ವಕ ಚತ್ತದಿಂದ ಹೊಡೆಯುತ್ತ, "ಈ ಭೈರವನು ದೆವ್ವಗಳಿಗೆ ಏನು ಮಾಡುತ್ತಾನೆ ಗೊತ್ತಾ? ಯಾವ ಮರದ ಪೊಟರೆಯೊಳಗೋ ಸುಮ್ಮನಿರುವುದು ಬಿಟ್ಟು ನಿನಗೆ ಕೊಡೆ ಬೇಕಾಯಿತೇನು?" ಎಂದನು. ವೆಂಕಟಾಚಲನು ಕೊಡೆಯನ್ನು ರಾಜಣ್ಣನಿಗೆ ಕೊಡುತ್ತ, "ನಾನು ದೆವ್ವ ಅಲ್ಲಾ! ವೆಂಕಟಾಚಲನೇ! ನನ್ನನ್ನು ಬಿಟ್ಟು ಬಿಡ್ರೋ!" ಎಂದು ಬಾಯಿ ಬಾಯಿ ಬಡೆದುಕೊಂಡನು.

ಭೈರವನು ಅವನ ಮಾತನ್ನು ಲಕ್ಷ್ಯ ಮಾಡದೆ, "ಯಾವುದು ದೆವ್ವವೋ ಯಾರು ಮನುಷ್ಯರೋ ನೀನು ನನಗೆ ಹೇಳುವೆಯಾ? ನಿನ್ನ ವೇಷ ನನ್ನ ಹತ್ತಿರ ಸಾಗೀತೇ? ನಿನ್ನನ್ನು ಮಾರಣಹೋಮ ಮಾಡುತ್ತೇನೆ. ಹ್ರಾಂ! ಹ್ರೀಂ, ಫಟ್!" ಎಂದು ವೆಂಕಟಾಚಲನನ್ನು ಹಣ್ಣುಗಾಯಿ ನೀರುಗಾಯಿ ಮಾಡಿ ಬಿಟ್ಟುಬಿಟ್ಟನು. "ಬದುಕಿದೆಯಾ ಬಡಜೀವವೇ" ಎಂದುಕೊಂಡು ವೆಂಕಟಾಚಲನು ತಿರುಗಿ ನೋಡದೆಯೇ ಓಡಿಹೋದನು. "ಇನ್ನು ನಡೆ ರಾಜಣ್ಣ. ಇನ್ನು ಆ ದೆವ್ವ ಈ ಜನ್ಮದಲ್ಲಿ ನಿನ್ನ ತಂಟೆಗೆ ಬಾರದು!" ಎಂದನು ಭೈರವ ಮಂತ್ರವಾದಿ.

ತಾನು ಭೈರವನ ಸಹಾಯದಿಂದ ದೆವ್ವದ ಕೈಯಿಂದ ಕೊಡೆಯನ್ನು ಹೇಗೆ ಸಂಪಾದಿಸಿಕೊಂಡೆನೆಂಬುದನ್ನು ವೆಂಕಟಾಚಲನೊಂದಿಗೆ ಹೇಳಬೇಕೆಂದು ರಾಜಣ್ಣ ಅಂದುಕೊಂಡಿದ್ದ. ಆದರೆ ಮತ್ತೆ ಅವನಿಗೆ ವೆಂಕಟಾಚಲನು ಕಾಣಲೇ ಇಲ್ಲ. ಎತ್ತ ಹೋದನೋ?





# ದೇವೀಭಾಗವತ

ಯುಧಾಜಿತ್ತು ಹೇಳಿದ ಕರುಳು ಚುಚ್ಚುವ ಮಾತುಗಳಿಗೆ ಏನು ಉತ್ತರ ಕೊಡುವುದೆಂದೇ ಕಾಶೀರಾಜನಿಗೆ ತೋರಲಿಲ್ಲ. ಅವನು ತಲೆ ತಗ್ಗಿಸಿಕೊಂಡು ಅಂತಃಪುರಕ್ಕೆ ಹೋಗಿ ತನ್ನ ಹೆಂಡತಿಯೊಂದಿಗೆ, "ನಮ್ಮ ಹುಡುಗಿ ಆ ಸುದರ್ಶನನನ್ನು ಬಿಟ್ಟು ಬೇರೆ ಯಾವನನ್ನಾದರೂ ವರಿಸಿದರೆ ಹೊರತು ನಮ್ಮ ಮಾನ ಉಳಿಯುವಂತಿಲ್ಲ" ಎಂದನು.

ಅದನ್ನು ಕೇಳಿ ರಾಣಿಯೂ ಹೊರೆ ಚಿಂತೆಯೊಂದಿಗೆ ತನ್ನ ಕುಮಾರಿಯ ಬಳಿಗೆ ಹೋಗಿ, "ಏಕೆ ಮಗಳೇ ಇಷ್ಟು ಹಟ ಮಾಡುವಿ ? ನಿನ್ನನ್ನು ಮದುವೆಯಾಗಬೇಕೆಂದು ಅಷ್ಟು ಮಂದಿ ರಾಜರೂ ರಾಜಕುಮಾರರೂ ಬಂದಿರುವಾಗ, ಆ ಗತಿಗೇಡಿ ಸುದರ್ಶನನನ್ನೇ ಮದುವೆಯಾಗುವುದೆಂದು ಹಟ ಹಿಡಿದು ನಮ್ಮ ಪ್ರಾಣದ ಮೇಲೆ ತರುತ್ತೀಯಲ್ಲಮ್ಮಾ ? ಬಾ. ಸ್ವಯಂವರ ಮಂಟಪಕ್ಕೆ ಹೋಗೋಣ. ನೀನು ಸುದರ್ಶನನನ್ನೇ ವರಿಸುವಿಯಾದರೆ ಯುಧಾಜಿತ್ತು ಆ ಸುದರ್ಶನನನ್ನು ಮಾತ್ರವಲ್ಲ, ನಿನ್ನನ್ನು ನನ್ನನ್ನು ನಿನ್ನ ತಂದೆಯನ್ನೂ ಸಹ ಕೊಂದುಬಿಡುತ್ತಾನೆ. ಮಹಾ ಕ್ರೂರನಾದ ಅವನಿಗೆ ಅಷ್ಟೊಂದು ಶಕ್ತಿಯೂ ಇದೆ. ಬೇಡಮ್ಮ ಈ ಹಟ" ಎಂದು ನಯಭಯಗಳಿಂದ ತುಂಬಾ ಹೇಳಿದಳು. ಅದೇ ಸಮಯದಲ್ಲಿ ತಂದೆಯೂ ಅಲ್ಲಿಗೆ ಬಂದು ಶಶಿಕಳೆಗೆ ಹಟವನ್ನು ಬಿಡಲು ಬಗೆ ಬಗೆಯಾಗಿ ಹೇಳಿದನು.

ಯಾರೆಷ್ಟೇ ಹೇಳಿದರೂ ಶಶಿಕಳೆ ತನ್ನ ದೃಢತೆಯನ್ನು ಬಿಡದೆ, ಆತ್ಮಹತ್ಯ ಮಾಡಿಕೊಳ್ಳುವೆನೇ ಹೊರತು ಇನ್ನೊಬ್ಬನನ್ನು ಕಣ್ಣೆತ್ತಿಯೂ ನೋಡಲಾರೆನೆಂದು ಹೇಳಿಬಿಟ್ಟಳು. ಆ ಮೇಲೆ ತಂದೆಯೊಂದಿಗೆ, "ಅಪ್ಪಾ, ನಿಮಗೆ ಈ ರಾಜ ಮಹಾರಾಜರನ್ನು ನೋಡಿ ಭಯವಾಗಿದ್ದರೆ ನನ್ನನ್ನು ಸುದರ್ಶನನಿಗೆ ಧಾರೆಯೆರೆದು ದಾನಮಾಡಿಕೊಟ್ಟು ರಥದ ಮೇಲೆ ಕೂಡಿಸಿ ರಾಜಧಾನಿಯ ಗಡಿ ದಾಟಿಸಿಬಿಟ್ಟುಬಿಡಿ. ಯುದ್ಧ ನಡೆದರೆ ಸುದರ್ಶನನೇ ನೋಡಿಕೊಳ್ಳುತ್ತಾನೆ. ನಿಮಗೆ ಆ ಭಯಬೇಡ" ಎಂದಳು.

"ನೋಡಮ್ಮಾ, ಅನೇಕ ಮಂದಿಗಳೊಂದಿಗೆ

೧೦. ಸುದರ್ಶನನಿಗೆ ರಾಜ್ಯಪ್ರಾಪ್ತಿ



ವಿರೋಧ ತಂದು ಕೊಳ್ಳುವುದು ಯಾರಿಗೂ ಒಳ್ಳೆಯ ದಲ್ಲ. ಸುಮ್ಮನೆ ಮೊಂಡುಪಟ್ಟು ಮಾಡಬೇಡ. ಎಲ್ಲಾ ಕೆಲಸಗಳಿಗೂ ದುಃಸಾಹಸ ತೋರಿಸಬಾರದು. ನಿಮ್ಮನ್ನು ಗಡಿದಾಟಿಸಿ ಬಿಟ್ಟ ಮಾತ್ರಕ್ಕೆ ಆಗಿ ಹೋಯಿತೆ? ಆ ದುಷ್ಟರೂ ನಿಮ್ಮನ್ನು ಸುತ್ತಿ ಮುತ್ತಿದರೆ ನೀವೇನು ಮಾಡ ಬಲ್ಲಿರಿ? ನನಗೊಂದು ಕ್ರಮ ಹೊಳೆಯುತ್ತದೆ. ಸೀತೆಯ ಮದುವೆಗೆ ಇಟ್ಟ ಹಾಗೆ ನಿನ್ನ ಮದುವೆಗೂ ಒಂದು ಪರೀಕ್ಷೆ ಇಡುತ್ತೇನೆ. ಅದರಲ್ಲಿ ಗೆದ್ದವನನ್ನು ಮದುವೆಯಾಗು" ಎಂದನು ಸುಬಾಹು.

"ಅದರಿಂದಾದರೂ ಸಮಸ್ಯೆ ತೀರುವುದು ಹೇಗೆ? ಆ ಪಂಥದಲ್ಲಿ ಯಾವನೋ ಗೆದ್ದು ನನ್ನನ್ನು ಮದುವೆ ಯಾಗಿ ಬಿಡುತ್ತಾನೆ. ಆಗ ಮಾತ್ರ ಉಳಿದವರು ನೋಡುತ್ತಾ ಸುಮ್ಮನಿರುವರೆ? ಪಂಥದಲ್ಲಿ ಸುದರ್ಶ ನನೇ ಗೆದ್ದರೂ ಉಳಿದವರು ಯುದ್ಧಕ್ಕೆ ಬರುವು ದಂತೂ ಖಂಡಿತ. ಧರ್ಮವೋ ನ್ಯಾಯವೋ ಯಾರಿಗೂ ಬೇಡ. ಅಪ್ಪಾ, ನೀವು ಧೈರ್ಯದಿಂದ ಮಹಾದೇವಿಯನ್ನೇ ನಂಬಿರುವ ನನ್ನನ್ನು ಸುದರ್ಶ ನನಿಗೆ ಕೊಟ್ಟು ಮದುವೆ ಮಾಡಿಬಿಡಿ" ಎಂದಳು ಶಶಿಕಳೆ. ಮಗಳ ನಿರ್ಣಯದಂತೆ ಮಾಡಲು ನಿಶ್ಚಯಿಸಿ ಸುಬಾಹುರಾಜನು ಸಭೆಗೆ ಬಂದು ಎಲ್ಲರನ್ನೂ ನೋಡಿ ಕೈ ಮುಗಿದು, "ಮಹಾರಾಜರೇ, ಈ ದಿನಕ್ಕೆ ಸಭೆ ಯನ್ನು ಸಾಕು ಮಾಡೋಣ. ನಾಳೆ ನಿಮಗೆಲ್ಲಾ ಒಪ್ಪಿತವಾಗುವ ರೀತಿಯಲ್ಲಿ ಸ್ವಯಂವರವು ನಡೆಯು ತ್ತದೆ. ಈ ದಿನ ನೀವು ನಿಮ್ಮ ಬಿಡದಿಗಳಿಗೆ ದಯ ಮಾಡಿರಿ" ಎಂದು ಕೇಳಿಕೊಂಡನು.

ರಾಜರೆಲ್ಲರೂ ತಮ್ಮ ತಮ್ಮ ಶಿಬಿರಗಳಿಗೆ ಹಿಂದಿ ರುಗಿ ಹೋಗಿ ನಗರದ ನಾಲ್ಕು ಪಕ್ಕಗಳಲ್ಲಿಯೂ ತಮ್ಮ ತಮ್ಮ ಸೇನೆಗಳನ್ನು ಕಾವಲಿಗಿಟ್ಟರು. ಸುಬಾಹು ವಿನ ಮೇಲೆ ಅವರಿಗೇನೋ ಸಂದೇಹವಾಗಿತ್ತು.

ಸುಬಾಹುರಾಜನು ರಹಸ್ಯವಾಗಿ ವಿವಾಹದ ಏರ್ಪಾಡುಗಳನ್ನು ಮಾಡಿ, ಸುದರ್ಶನನನ್ನು ಕರೆಯಿಸಿ ತನ್ನ ಕುಮಾರಿ ಶಶಿಕಳೆಯನ್ನು ಶಾಸ್ತ್ರೋಕ್ತವಾಗಿ ಅವನಿಗೆ ಕನ್ಯಾದಾನ ಮಾಡಿ ಕೊಟ್ಟುಬಿಟ್ಟನು. ಆ ಸಂದರ್ಭದಲ್ಲಿ ಅವನು ತನ್ನ ಅಳಿಯನಿಗೆ ಎರಡು ನೂರು ರಥಗಳನ್ನೂ, ಕೆಲವು ಸಾವಿರ ಕುದುರೆ ಗಳನ್ನೂ, ಕೆಲವು ನೂರು ಮಂದಿ ದಾಸಿಯರನ್ನೂ ಇತರ ಕಾಣಿಕೆ ವಸ್ತುಗಳನ್ನೂ ಕೊಟ್ಟನು. ಆ ಮೇಲೆ ಅವನು ಮನೋರಮೆಯೊಂದಿಗೆ, "ಅಮ್ಮಾ, ಇನ್ನು ನನ್ನ ಮಗಳು ನಿನ್ನ ಮಗನ ಸೊತ್ತು. ಅವಳನ್ನು ಪ್ರೀತಿಯಿಂದ ನೋಡಿಕೋ" ಎಂದು ಹೇಳಿಕೊಂಡು ನಮಸ್ಕಾರ ಮಾಡಿದನು.

ಮನೋರಮೆ ಬಹಳ ಸಂತೋಷಪಟ್ಟು, "ಅಯ್ಯಾ, ಮಹಾರಾಜರಾಗಿದ್ದು ಕೂಡಾ ರಾಜ್ಯ ವಿಹೀನನಾದ ನನ್ನ ಮಗನಿಗೆ ನಿಮ್ಮ ಮಗಳನ್ನು ಕೊಟ್ಟ ದ್ದೀರಿ. ಆ ಹುಡುಗಿಕೂಡ ರತ್ನಗಳ ಬೊಂಬೆಯೇ. ನಿಮ್ಮಂಥ ಉತ್ತಮರು ಎಲ್ಲಿಯೂ ಇರಲಾರರು.

ನಿಮ್ಮ ಕುಮಾರಿಯ ಭಾರವು ನಮ್ಮದು, ನಮ್ಮ ಭಾರ ನಿಮ್ಮದು !" ಎಂದಳು.

ಅದಕ್ಕೆ ಸುಬಾಹು, "ಅಮ್ಮಾ, ನಿನ್ನ ಮಗನು ರಾಜ್ಯ ವಿಹೀನನೆಂದು ಏಕೆ ಅಂದುಕೊಳ್ಳಬೇಕು ? ನನ್ನ ರಾಜ್ಯವು ಅವನದೇ ಅಲ್ಲವೇ ? ನನ್ನ ಎಲ್ಲಾ ಸೇನೆಯನ್ನೂ ಕೊಡುತ್ತೇನೆ. ನಾವು ಹಾಲು ನೀರಿನಂತೆ ಒಂದುಗೂಡಿರುವಾಗ, ಒಬ್ಬನು ರಾಜನೇದೂ, ಇನ್ನೊಬ್ಬನು ಸೇವಕನೆಂದೂ ಭೇದಮಾಡಿ ನೋಡುವ ಅವಶ್ಯವೇನಿದೆ? ಇತರ ರಾಜರಿರುವ ಮಾತು ನಿಜವೇ. ಅವರನ್ನು ಸಾಮ ದಾನ ಭೇದಗಳಿಂದ ಸಮಾಧಾನ ಪಡಿಸುತ್ತೇನೆ. ಹಾಗೂ ಮೀರಿ ಬಂದರಾದರೆ, ನಾನೂ ಯುದ್ಧಮಾಡಲು ಹಿಂಜರಿಯುವವನಲ್ಲ. ಜಗದಂಬೆಯ ಆಶ್ರಯವಿರುವಾಗ ಚಿಂತೆ ಮಾಡುತ್ತ ಬೇಡದ್ದನ್ನು ಏಕೆ ಶಂಕಿಸಿ ಕೊಂಡಿರಬೇಕು?" ಎಂದನು.

"ಎಂತಹ ಒಳ್ಳೆಯ ಮಾತು ಹೇಳಿದಿರಿ ! ನಿಮಗೆ ಶುಭವಾಗುತ್ತದೆ. ನಿಮ್ಮ ರಾಜ್ಯವನ್ನು ನೀವೂ, ನಿಮ್ಮ ಕುಮಾರರೂ ಸುಖವಾಗಿ ಆಳಿಕೊಂಡಿರಿ. ಜಗನ್ಮಾತೆಯ ಅನುಗ್ರಹದಿಂದ ನನ್ನ ಮಗನು ತನ್ನ ತಂದೆಯ ರಾಜ್ಯವನ್ನೇ ತಿರುಗಿ ಸಂಪಾದಿಸಿ ಕೊಳ್ಳುವನು. ಗ್ರಹಚಾರವು ಸರಿಯಾಗಿದ್ದವನು ಮಣ್ಣು ಹಿಡಿದುಕೊಂಡರೆ ಚಿನ್ನವಾಗಿಬಿಡುತ್ತದೆ. ಅವನು ಏನು ಮಾಡಿದರೂ ಒಳಿತೇ ಕೂಡಿಬರುತ್ತದೆ. ಎಲ್ಲರೂ ಸಹಾಯಕರಾಗುತ್ತಾರೆ. ಈಗ ನನ್ನ ಮಗನ ಅದೃಷ್ಟವು ಚೆನ್ನಾಗಿದೆ. ಇನ್ನು ಬರುವುದೆಲ್ಲಾ ಅವನಿಗೆ ಒಳ್ಳೆಯ ದಿನಗಳೇ. ಕೆಟ್ಟದಿನಗಳು ಕಳೆದು ಹೋದುವು" ಎಂದಳು ಮನೋರಮೆ.

ಆ ಸಮಯದಲ್ಲಿ ಬಿಡದಿಗಳಲ್ಲಿದ್ದುಕೊಂಡು ಸಂದೇಹಪಡುತಾ ಕಿವಿಚೂಪು ಮಾಡಿಕೊಂಡಿದ್ದ ರಾಜರಿಗೆ ಮಂಗಳ ವಾದ್ಯಗಳ ಧ್ವನಿ ಕೇಳಿಸಿತು. "ಈ ವಾದ್ಯಗಳ ಧ್ವನಿ ಎಂತಹುದು ?" "ಇದು ಮದುವೆಯ ವಾದ್ಯ ಧ್ವನಿಯಂತಿದೆಯಲ್ಲಾ ?"



"ಈ ರಾಜನು ನಮ್ಮೆಲ್ಲರ ಕಣ್ಣಿಗೂ ಧೂಳುಚೆಲ್ಲಿ ಮಗಳನ್ನು ಅವನಿಗೆ ಕೊಟ್ಟು ಮದುವೆ ಮಾಡಿ ಬಿಡಲಿಲ್ಲವಷ್ಟೆ ?" ಎಂದು ಅವರವರು ಅಂದು ಕೊಳ್ಳುತ್ತಿರುವಾಗ, ಸುಬಾಹು ರಾಜನು ಅವರ ಬಳಿಗೆ ಬಂದು ವಿನಯದಿಂದ ಕೈಮುಗಿದು "ಮಹಾರಾಜರೇ, ಮದುವೆಯ ಔತಣದೂಟಕ್ಕೆ ತಾವೆಲ್ಲರೂ ದಯ ಮಾಡಬೇಕು" ಎಂದು ಆಹ್ವಾನಿಸಿದನು.

ಅವನ ಆಹ್ವಾನ ವಾರ್ತೆಯನ್ನು ರಾಜರಾರೂ ಆದರದಿಂದ ಕೇಳಿಸಿಕೊಳ್ಳದೆ ಅರ್ಥವೇನೆಂಬಂತೆ ಹುಬ್ಬೆತ್ತಿ ನೋಡಿದರು. ಕಾಶೀರಾಜನು ಅವರೊಂದಿಗೆ, "ನಾನೇನು ಮಾಡಲಿ ? ನಾನು ಎಷ್ಟು ವಿಧವಾಗಿ ಹೇಳಿದರೂ ನನ್ನ ಮಗಳು ಕೇಳಲಿಲ್ಲ. ಅಂಥವಳನ್ನು ಬೇರೆ ಯಾರು ಮದುವೆ ಮಾಡಿಕೊಂಡರೂ ಸುಖವಾಗದು. ಅವಳು ಸುದರ್ಶನನನ್ನೇ ಮದುವೆಯಾಗಿ ಬಿಟ್ಟಳು. ಎಲ್ಲಾ ಶಾಸ್ತ್ರೋಕ್ತವಾಗಿ ನಡೆಯಿತು. ನೀವೆಲ್ಲಾ ನನ್ನ ಮೇಲೆ ಅನುಗ್ರಹ



ವಿಟ್ಟು ಔತಣದಲ್ಲಿ ಭಾಗವಹಿಸಿ ನನ್ನ ಮರ್ಯಾದೆಯನ್ನು ಉಳಿಸಬೇಕು" ಎಂದನು.

"ರಾಜಾ, ನಮ್ಮ ಭೋಜನ ಮುಗಿಯಿತು ಇನ್ನು ಯಾರೂ ಬಾರರು. ಅರ್ಧ ರಾತ್ರಿಯ ಮದುವೆಯಿಂದ ತುಂಬಾ ಬಳಲಿರುವಿ. ಊಟದ್ದೇನು ಮಹಾ ? ನೀನು ಹೋಗಿಬಿಡು. ನಾವು ಹೊರಡುತ್ತೇವೆ." ಎಂದರು ರಾಜರು.

ಸುಬಾಹುರಾಜನು ಅವರ ಮೇಲೆ ಅನುಮಾನ ಪಡುತ್ತ ತನ್ನ ಭವನಕ್ಕೆ ಹಿಂದಿರುಗಿದನು. ಅವನು ಅಲ್ಲಿಂದ ಹೋದ ಕೂಡಲೇ ರಾಜರಲ್ಲಿ ಕೆಲವರು, ಸುದರ್ಶನನನ್ನು ಕೊಂದು ರಾಜಕುಮಾರಿಯನ್ನು ವಶಪಡಿಸಿಕೊಳ್ಳೋಣವೆಂದರು. ಅದು ಅನ್ಯಾಯವೆಂದೂ ಮಾತಾಡದೆ ಅವರವರ ದಾರಿ ಹಿಡಿದು ಅವರವರು ಹೋಗಿ ಬಿಡುವುದೇ ಒಳ್ಳೆಯದೆಂದೂ ಮತ್ತೆ ಕೆಲವರು ಹೇಳಿದರು. ಉಳಿದವರು ಬೇರೆ ಬೇರೆ ವಿಧವಾಗಿ ಮಾತಾಡಿದರು.

ಇಷ್ಟರೊಳಗೆ ಸುಬಾಹುರಾಜನು ಮದುವೆಯ ಕಾರ್ಯಾಂಗಗಳೆಲ್ಲವನ್ನೂ ಮುಗಿಸಿ, ಮಗಳನ್ನೂ ಅಳಿಯನನ್ನೂ ಕಳುಹಿಸಿಕೊಡುವ ಏರ್ಪಾಡುಗಳನ್ನು ಮಾಡುತ್ತಿರುವಾಗ ಕೆಲವರು ಬಂದು, "ರಾಜಾ, ವಧೂವರರನ್ನು ಈಗ ಕಳುಹಿಸಿ ಕೊಡಬೇಡ. ದಾರಿಯಲ್ಲಿ ಶತ್ರುಗಳು ರಾಕ್ಷಸರ ಹಾಗೆ ಹೊಂಚು ಹಾಕಿಕೊಂಡಿದ್ದಾರೆ" ಎಂದು ಹೇಳಿದರು.

ಆ ರಾಜ ಮಹಾರಾಜರ ಸಂಗತಿ ತಿಳಿದವನಾದ ಸುಬಾಹು ಕಳುಹಿಸಿ ಕೊಡಲೋ ಬಿಡಲೋ ಎಂದು ಸಂಶಯ ಪಡತೊಡಗಿದನು. ಆತನ ಆಂದೋಳನೆಯನ್ನು ನೋಡಿ ಸುದರ್ಶನನು, "ಮಹಾರಾಜರೇ, ನೀವೇನೂ ಸಂದೇಹಿಸಬೇಡಿ, ಹಿಂಜರಿಯುವುದೂ ಬೇಡ. ಮಹಾದೇವಿ ನನ್ನ ಪಕ್ಷದಲ್ಲಿರುವಾಗ ಈ ರಾಜರೆಲ್ಲ ನನ್ನನ್ನೇನು ಮಾಡಬಲ್ಲರು ? ನಾವು ನಮ್ಮ ಆಶ್ರಮಕ್ಕೆ ಹೋಗಿ ಸಂತೋಷವಾಗಿರುತ್ತೇವೆ. ಆಶ್ರಮದಲ್ಲಿ ಅದೇನು ಸಂಸಾರವೋ ಎಂದು ಅನುಮಾನಿಸಬೇಡಿ. ಆ ಪ್ರಕೃತಿ ಸೌಂದರ್ಯದ ಮುಂದೆ ನಿಮ್ಮ ನಗರಗಳೆಲ್ಲ ಯಾವ ಮೂಲೆಗೆ ?" ಎಂದನು.

ಆದರಿಂದ ಧೈರ್ಯಗೊಂಡ ಕಾಶೀರಾಜನು ತನ್ನ ಅಳಿಯನಿಗೆ ಅಪಾರವಾಗಿ ಧನ ಕನಕಾದಿಗಳನ್ನು ಕೊಟ್ಟು ಕಳುಹಿಸುತ್ತ, ತಾನು ಕೂಡಾ ಸೈನ್ಯದೊಂದಿಗೆ ಜತೆಯಲ್ಲೇ ಹೊರಟನು.

ದಾರಿಯಲ್ಲಿ ಕಾದುಕೊಂಡಿದ್ದ ರಾಜರು ದೂರದಿಂದ ಬರುವ ಗುಂಪನ್ನು ನೋಡಿ, "ಅದೋ ರಥ ! ಅವನೇ ಸುದರ್ಶನ ! ಹೆಂಡತಿಯೊಂದಿಗೆ ಕುಳಿತಿದ್ದಾನೆ ! ತಡೆಯೋಣ. ಹಿಡಿಯೋಣ ! ಹೊಡೆದು ಸುದರ್ಶನನ ಇತಿ ಶ್ರೀ ಮಾಡಿಬಿಡೋಣ ! ವಧುವಿಗೇನೂ ಆಗದಂತೆ ಎಚ್ಚರ !" ಎಂದು ಮುಂತಾಗಿ ಕೂಗುತ್ತ ವಿಜೃಂಭಿಸಿದರು.

ಸುಬಾಹು ಅವರನ್ನು ಮುಂದಕ್ಕೆ ಬಾರದಂತೆ ತಡೆದನು. ಸುದರ್ಶನನು ಮಂತ್ರವನ್ನು ಜಪಿಸುತ್ತ

ಅಂಬಾದೇವಿಯನ್ನು ಧ್ಯಾನಿಸಿದನು. ಆ ಸಮಯದಲ್ಲಿ ಶತ್ರುಜಿತ್ತು ಮತ್ತು ಯುಧಾಜಿತ್ತುಗಳು ತೀವ್ರ ಯುದ್ಧವನ್ನು ಮಾಡಲು, ಸುಬಾಹು ವೀರಾವೇಶದಿಂದ ಶಂಖನಾದ ಮಾಡಿ, ಯುಧಾಜಿತ್ತುವಿನ ಮೇಲೆ ಬಾಣ ಪರಂಪರೆಗಳನ್ನು ಕರೆಯ ತೊಡಗಿದನು. ಇಬ್ಬರೊಳಗೆ ಘೋರ ಯುದ್ಧವೇ ನಡೆಯಿತು.

ಆಗ ಜಗದಂಬೆ ದಿವ್ಯವಾದ ಆಕಾರದಿಂದ ಜಗಜಗಿಸಿ ಪ್ರತ್ಯಕ್ಷಳಾಗಿ, ಅನೇಕ ಮಹಾ ಯುದ್ಧಗಳಿಂದಲೂ, ಹೂಗಳ ಮಾಲೆಗಳಿಂದಲೂ ಸಿಂಹದ ಮೇಲೆ ಕುಳಿತು ಸುದರ್ಶನನ ಇದಿರಿಗೆ ಬಂದಳು. ಸುದರ್ಶನನು ಆನಂದದಿಂದ ಪುಲಕಿತನಾದನು. ಆ ಮಹಾದೇವಿಯನ್ನು ತನ್ನ ಮಾವನಿಗೆ ತೋರಿಸಿ "ಇನ್ನು ನಮಗೆ ಭಯವೆಲ್ಲಿಯದು ?" ಎಂದು ಹೆಂಡತಿಯೊಂದಿಗೆ ರಥದಿಂದಿಳಿದು ಮಾವಯ್ಯನನ್ನೂ ಕೈ ಹಿಡಿದು ಕರೆದು ದೇವಿಯ ಕಾಲಿಗೆ ಪ್ರಣಾಮ ಮಾಡಿದನು.



ಮಹಾ ಸಿಂಹವನ್ನು ನೋಡಿ ಶತ್ರು ಪಕ್ಷದ ಆನೆಗಳು ಹೆದರಿ ಘೀಳಿಡುತ್ತಿದ್ದುವು. ಅವುಗಳನ್ನು ನೋಡಿ ಸಿಂಹವೂ ಗರ್ಜಿಸಿತು. ಅದೇ ಸಮಯದಲ್ಲಿ ದಾರುಣವಾಗಿ ಬಿರುಗಾಳಿ ಬೀಸ ತೊಡಗಿತು. ಅದರಿಂದ ಪ್ರಕೃತಿಯೇ ಬೀಭತ್ಸ ರೂಪತಾಳಿದುದನ್ನು ನೋಡಿ ರಾಜರೆಲ್ಲಾ ಭೀತಿಯಿಂದ ಕಂಪಿಸುತ್ತ ಕಡೆಗೆ ನಿಶ್ಚೇಷ್ಟಿತರಾಗಿಬಿಟ್ಟರು.

ಸುದರ್ಶನನು ತಮ್ಮ ಸೇನಾಧಿಪತಿಯನ್ನು ನೋಡಿ, "ಮಹಾ ದೇವಿಯೇ ನಮ್ಮನ್ನು ರಕ್ಷಿಸಲು ಬಂದಳು. ನೀನು ಸ್ವಲ್ಪ ಕೂಡಾ ಸಂಶಯ ತಾಳದೆ ರಾಜರ ಮೇಲೆ ಸೇನೆಗಳನ್ನು ನಡೆಯಿಸು" ಎಂದನು.

ಕೂಡಲೇ ಕಾಶೀರಾಜನ ಸೇನೆಗಳು ಶತ್ರು ರಾಜರ ಮೇಲೆ ಧಾವಿಸಿಕೊಂಡು ಹೋದುವು.

ನಿಶ್ಚೇಷ್ಟಿತರಾಗಿ ನಿಂತಿದ್ದ ರಾಜರನ್ನೆಲ್ಲ ನೋಡಿ ಯುಧಾಜಿತ್ತು "ಬಿರುಗಾಳಿ ನಿಂತಿತು. ಇದೆಲ್ಲಾ ಹುಸಿ, ಮಾಯೆ. ಯಾವಳೋ ಹೆಂಗುಸು ಸಿಂಹದ ಮೇಲೆ ಕುಳಿತು ಬಂದದ್ದು ನೋಡಿ ನಿಮಗೆಲ್ಲಾ ಬುದ್ಧಿ ಮಂಕಾಯಿತೇನು ? ಒಬ್ಬ ಅರ್ಭಕನು ಒಂದು ಹೆಂಗುಸನ್ನು ಜತೆಗಿಟ್ಟು ಕೊಂಡರೆ ಇಷ್ಟೂ ಮಂದಿ ರಾಜರೂ ಮರಗಟ್ಟಿ ಹೋಗಬೇಕೆ ? ಕ್ಷಣ ಮಾತ್ರದಲ್ಲಿ ಅವನನ್ನು ಕೊಂದು ರಾಜಕುಮಾರಿಯನ್ನು ಎಳೆದುಕೊಂಡು ತನ್ನಿರಿ ! ಹೋಗಿರಿ !" ಎಂದು ತನ್ನ ಮೊಮ್ಮಗನಾದ ಶತ್ರುಜಿತ್ತುವನ್ನು ಕರೆದುಕೊಂಡು ಸುದರ್ಶನನ ಮೇಲೆ ಯುದ್ಧಕ್ಕೆ ಹೋದನು.

ಆಗ ಅಂಬಾದೇವಿ ಎಲ್ಲಾ ರಾಜರೊಂದಿಗೂ ಅನೇಕರೂಪಗಳಲ್ಲಿ ಕಂಡು ಎಲ್ಲರೊಂದಿಗೂ ಒಂದೇ ಸಾರಿ ಯುದ್ಧ ಮಾಡಿದಳು. ಕ್ಷಣ ಮಾತ್ರದಲ್ಲಿ ಯುಧಾಜಿತ್ತುವೂ, ಶತ್ರುಜಿತ್ತುವೂ ದೇವಿಯ ಬಾಣಗಳಿಂದ ಸತ್ತುಬಿದ್ದರು. ಉಳಿದವರೆಲ್ಲ ಮತ್ತೆ ಯುದ್ಧ ಮಾಡುವುದನ್ನು ಬಿಟ್ಟು ನಿಶ್ಚೇಷ್ಟಿತರಾದರು. ಸುಬಾಹುರಾಜನು ಆನಂದ ಬಾಷ್ಪಗಳನ್ನು



ಉದುರಿಸುತ್ತಾ ಆ ಪರಾಶಕ್ತಿಯನ್ನು ಸ್ತೋತ್ರ ಮಾಡಿದನು. ತರುವಾಯ ಅವನು ದೇವಿಯೊಂದಿಗೆ, "ತಾಯೇ ! ನಿನ್ನ ದರ್ಶನದಿಂದ ಧನ್ಯನಾದೆನು. ನೀನು ಶಾಶ್ವತವಾಗಿ ನನ್ನ ಹೃದಯದೊಳಗೆ ನಿಂತು ಕೊಳ್ಳಬೇಕು. ನೀನು ಈ ಕಾಶಿಯಲ್ಲೇ ನೆಲೆಸಿರಬೇಕು. ಬೇರೆಯಾರ ಆಶ್ರಯವೂ ನನಗೆ ಬೇಕಾಗಿಲ್ಲ. ಭೂಮಿ ಇರುವವರೆಗೂ ಕಾಶಿಯೂ ಇರುತ್ತದೆಂದು ಹೇಳು ತ್ತಾರೆ. ಕಾಶಿ ಇರುವಷ್ಟು ಕಾಲವೂ ನೀನೂ ಇಲ್ಲೇ ಇದ್ದು, ಕಾಶಿಗೆ ಶತ್ರು ಭಯವಿಲ್ಲದಂತೆ ಮಾಡಮ್ಮಾ. ಇದೇ ನಾನು ನಿನ್ನನ್ನು ಬೇಡುವ ವರ" ಎಂದು ಪ್ರಾರ್ಥಿಸಿಕೊಂಡನು. ಹಾಗೆಯೇ ಆಗಲೆಂದು ಮಹಾ ದೇವಿ ಒಪ್ಪಿಕೊಂಡಳು.

ತರುವಾಯ ಸುದರ್ಶನನು ಮಹಾ ದೇವಿಯನ್ನು ಸ್ತೋತ್ರ ಮಾಡಿ, "ಅಮ್ಮಾ, ಇನ್ನು ನನ್ನ ಕರ್ತವ್ಯವೇನೆಂಬುದನ್ನು ತಿಳಿಸಬೇಕು. ನಾನು ಎಲ್ಲರ ಬೇಕೆಂಬುದನ್ನೂ ನೀನೇ ತಿಳಿಸಬೇಕು. ನಾನು ಅಸಮರ್ಥನಾಗಿದ್ದರೂ ನಿನ್ನ ಅನುಗ್ರಹವಿದ್ದರೆ ಏನನ್ನಾ ದರೂ ಸಾಧಿಸಬಲ್ಲೆನು. ಆದುದರಿಂದ ನಾನು ಮಾಡ ಬೇಕಾದುದನ್ನು ತಿಳಿಸಿ ಅನುಗ್ರಹಿಸು" ಎಂದು ಬೇಡಿ ಕೊಂಡನು. ಆದಕ್ಕೆ ದೇವಿ. "ಕಂದಾ, ನೀನು ಮಾಡ ಬೇಕಾದುದು ಹೆಚ್ಚೇನಿಲ್ಲ. ನಿನ್ನ ಹೆಂಡತಿಯೊಂದಿಗೆ ಅಯೋಧ್ಯೆಗೆ ಹೋಗಿ ಸಿಂಹಾಸನವನ್ನು ಏರಿಕೋ. ಒಳ್ಳೆಯ ರೀತಿಯಲ್ಲಿ ರಾಜ್ಯಭಾರ ಮಾಡಿಕೊಂಡಿರು. ಮೇಲಿನಿಂದ ನಿನ್ನನ್ನು ನಾನು ಕಾಪಾಡುತ್ತಾ ಇರು ತ್ತೇನೆ. ಪ್ರತಿ ಅಷ್ಟಮಿ. ನವಮಿ, ಚತುರ್ದಶಿಗಳಲ್ಲಿ ನನ್ನನ್ನು ಪೂಜಿಸು. ನನಗೆ ಶರತ್ಕಾಲವೆಂದರೆ ತುಂಬ ಇಷ್ಟ. ನವರಾತ್ರಿಯ ಪೂಜೆಗಳನ್ನು ನಾನು ಮೆಚ್ಚು ತ್ತೇನೆ. ಮಾಘ, ಚೈತ್ರ, ಆಶ್ವೀಜ, ಆಷಾಢ ಮಾಸ ಗಳಲ್ಲಿ ನನಗೆ ಉತ್ಸವಗಳನ್ನು ನಡೆಯಿಸು. ನಿನಗೂ ಪ್ರಜೆಗಳಿಗೂ ಶುಭವಾಗುವುದು" ಎಂದು ಹೇಳಿ ದೇವಿ ಅದೃಶ್ಯಳಾದಳು.

ತರುವಾಯ ರಾಜರು ಒಬ್ಬೊಬ್ಬರಾಗಿ ಬಂದು ಇಂದ್ರನಿಗೆ ದೇವತೆಗಳು ನಮಸ್ಕಾರ ಮಾಡಿದಂತೆ ಸುದರ್ಶನನಿಗೆ ನಮಸ್ಕಾರ ಮಾಡಿ, ಅಂಬಾದೇವಿ ಯನ್ನೂ ಸುತ್ತಿಸಿದರು. ಅವರೆಲ್ಲಾ ಸುದರ್ಶನನನ್ನು ತಮ್ಮ ಚಕ್ರವರ್ತಿಯಾಗಿ ಒಪ್ಪಿಕೊಂಡು, "ಮಹಾತ್ಮಾ, ನೀನು ಅಯೋಧ್ಯೆಯಲ್ಲಿದ್ದು ನಮ್ಮನ್ನೆಲ್ಲಾ ಪಾಲಿ ಸುತ್ತ, ನಮ್ಮ ಅಪಚಾರಗಳನ್ನು ಮನ್ನಿಸಿ ನಮಗೆ ಆಜ್ಞೆಗಳನ್ನು ಮಾಡುತ್ತ ರಾಜ್ಯಭಾರ ಮಾಡು. ನಿನ್ನ ಅನುಗ್ರಹದಿಂದಲೇ ಮಹಾ ದೇವಿ ಜಗದಂಬೆಯನ್ನು ನೋಡುವ ಭಾಗ್ಯ ನಮಗೆ ಸಿಕ್ಕಿತು." ಎಂದರು.

ತರುವಾಯ ರಾಜರೆಲ್ಲಾ ಅವರವರ ದೇಶಗಳಿಗೆ ಹೊರಟು ಹೋದರು. ಕಾಶೀರಾಜನೂ ತನ್ನ ಅಳಿಯನನ್ನೂ ಮಗಳನ್ನೂ ಇನ್ನಷ್ಟು ಚೆಂದಾಗಿ ಕಳುಹಿಸಿಕೊಟ್ಟನು.

ಸುದರ್ಶನನು ಅಯೋಧ್ಯೆಯನ್ನು ತಲಪುವ ಮೊದಲೇ ಈ ವಾರ್ತೆಗಳೆಲ್ಲ ಅಲ್ಲಿಗೆ ಮುಟ್ಟಿದ್ದುವು.

ಅಂತೆಯೇ ಮಂತ್ರಿ ಮುಂತಾದವರು ಮಂಗಳ ವಾದ್ಯಾದಿಗಳೊಂದಿಗೆ ಇದಿರಾಗಿಬಂದು ಪತ್ನೀ-ಸಹಿತನಾದ ಸುದರ್ಶನನನ್ನು ಭವ್ಯವಾದ ಸ್ವಾಗತೋಪಚಾರಗಳಿಂದ ನಗರದೊಳಗೆ ಕರೆದುಕೊಂಡು ಹೋದರು.

ಸುದರ್ಶನನು ಮೊದಲು ತನ್ನ ಸವತಿ ತಾಯಿಯ ಬಳಿಗೆ ಹೋಗಿ, ಅವಳಿಗೆ ನಮಸ್ಕಾರ ಮಾಡಿದನು. ತನ್ನ ಮಗನು ಸತ್ತುದರಿಂದ ಅಳುತ್ತಾ ಇದ್ದ ಲೀಲಾವತಿಯನ್ನು ಸುದರ್ಶನನು ಸಮಾಧಾನಪಡಿಸುತ್ತ, "ಅಮ್ಮಾ, ನಿನ್ನ ತಂದೆಯನ್ನೂ ನಿನ್ನ ಮಗನನ್ನೂ ಕೊಂದವನು ನಾನಲ್ಲ. ಮಹಾಶಕ್ತಿ! ನಿನ್ನ ಪಾದ ಸಾಕ್ಷಿಯಾಗಿ ಹೇಳುವ ಮಾತಿದು. ನನಗೆ ರಾಜ್ಯ ಪ್ರಾಪ್ತಿಯಾಗುವಂತೆ ಮಾಡಿದವಳೂ ಅವಳೇ. ಹೀಗೆ ಯಾರೋ ಮಾಡಿದ ಕರ್ಮಗಳಿಗೆ ನೀನೇಕೆ ಅಳಬೇಕು? ನನ್ನನ್ನು ನಿನ್ನ ಮಗನ ಹಾಗೆಯೇ ನೋಡಿಕೋ. ನನ್ನ ತಾಯಿ ಮನೋರಮೆಗಿಂತಲೂ ನೀನೇ ಹೆಚ್ಚಿನವಳಾಗು. ನಾನು ಯಾವ ಬಗೆಯ ಭೇದ ಬುದ್ಧಿಯನ್ನೂ ತೋರಿಸಲಾರೆ. ನಿನಗೆ ಯಾವಾಗಲೂ ಮಾತೃ ಸೇವೆ ಮಾಡಿಕೊಂಡಿರುತ್ತೇನೆ. ನಾನು ಸಣ್ಣವನಾಗಿದ್ದಾಗ ನಿನ್ನ ತಂದೆ ದುರುದ್ದೇಶದಿಂದ ನನ್ನನ್ನು ರಾಜ್ಯ ಭ್ರಷ್ಟನನ್ನಾಗಿ ಮಾಡಿದಾಗ, ಅದು ನನ್ನ ಪ್ರಾರಬ್ಧ ಕರ್ಮವೆಂದು ಕೊಂಡೆನೇ ಹೊರತು ಶೋಕಿಸಲಿಲ್ಲ. ನಿನ್ನ ತಂದೆ ನನ್ನ ತಾತನನ್ನು ಕೊಂದಾಗ, ನನ್ನ ತಾಯಿ ಶೋಕದ ಮೂರ್ತಿಯಾಗಿ ನನ್ನನ್ನೆತ್ತಿಕೊಂಡು ಕಾಡು ದಾರಿಯಲ್ಲಿ ಹೋಗುವಾಗ, ಕಳ್ಳರು ನಮ್ಮಲ್ಲಿದ್ದುದನ್ನೆಲ್ಲಾ ದೋಚಿಕೊಂಡರು. ತರುವಾಯ ಗಂಗಾ ತೀರದ ಋಷ್ಯಾಶ್ರಮದಲ್ಲಿರುತ್ತ. ಅವರ ಅನುಗ್ರಹದಿಂದ ಈಗ ಈ ಸ್ಥಿತಿಗೆ ಬಂದೆವು. ಈಗ ಕೂಡಾ ನನಗೆ ಯಾರ ಮೇಲೆಯೂ ಕೋಪವಿಲ್ಲ. ನೀನೂ ಕೋಪಿಸಬಾರದು" ಎಂದನು.

ಅವನ ಮಾತು ಕೇಳಿ ಲೀಲಾವತಿ ನಾಚಿಕೆ ಪಡುತ್ತ, "ನಾನು ಬೇಡೆಂದರೂ ಕೇಳದೆ ನನ್ನ ತಂದೆ ನಿನಗೆ ತುಂಬಾ ದ್ರೋಹಮಾಡಿ ಕಡೆಗೆ ತಾನೂ ಸತ್ತರು. ನನ್ನ ಮಗನ ಸಾವಿಗೂ ಕಾರಣರಾದರು. ನಿನ್ನ ತಾಯಿ, ನನ್ನ ಅಕ್ಕನೇ ಆದುದರಿಂದ ನೀನೂ ನನ ಮಗನೇ ಅಪ್ಪ. ಇನ್ನು ಚಿಂತಿಸಿ ಲಾಭವಾದರೂ ಏನಿದೆ? ನನ್ನವರೆಲ್ಲ ಸಾಯಲು ಕಾರಣನಾದವನು ನೀನಲ್ಲವೆಂದು ನನಗೆ ಗೊತ್ತಿದೆಯಪ್ಪಾ" ಎಂದಳು.

ತರುವಾಯ ಸುದರ್ಶನನು ತನ್ನ ಮಂತ್ರಿಗಳಿಂದ ಒಂದು ಬಂಗಾರದ ಸಿಂಹಾಸನವನ್ನು ತಯಾರು ಮಾಡಿಸಿ, ಅದರ ಮೇಲೆ ಜಗದಂಬೆಯನ್ನು ಯಥಾ ವಿಧಿಯಾಗಿ ಸ್ಥಾಪಿಸಿದನು. ದಿನಾ ಪೂಜೆಗಳು ನಡೆಯುವಂತೆ ಏರ್ಪಾಡು ಮಾಡಿ, ಆಮೇಲೆ ತಾನು ಪಟ್ಟಾಭಿಷಿಕ್ತನಾಗಿ ಸೊಗಸಾಗಿ ರಾಜ್ಯಭಾರ ಮಾಡಿದನು.





# ಅಸಲು ತಪ್ಪು

ಹಿಂದೆ ಒಬ್ಬ ಜನಪ್ರಿಯನಾದ ರಾಜನಿಗೆ ಶ್ರದ್ಧೆಯಿಂದ ಕೆಲಸ ಮಾಡುವ ಉದ್ಯೋಗಸ್ಥರನ್ನು ಆರಿಸಿ ಪ್ರತ್ಯೇಕವಾಗಿ ಸನ್ಮಾನಮಾಡಬೇಕೆಂದು ತೋರಿತು. ಹಾಗೆ ಮಾಡಿದರೆ ಅವರು ಇನ್ನಷ್ಟು ಶ್ರದ್ಧೆಯಿಂದ ಕಾರ್ಯದೀಕ್ಷೆಯುಳ್ಳವರಾಗುತ್ತಾರೆ ಎಂದುಕೊಂಡನು. ಅದಕ್ಕಾಗಿ ರಾಜನು ಇಬ್ಬರು ಮಂತ್ರಿಗಳನ್ನು ನಿಯಮಿಸಿದನು. ಅವರು ಬೇರೆ ಬೇರೆಯಾಗಿ ಪ್ರತಿಯೊಬ್ಬ ರಾಜಾಂಗದ ಉದ್ಯೋಗಸ್ಥನನ್ನು ಗಮನಿಸಿ ತಮ್ಮ ಅಭಿಪ್ರಾಯವನ್ನು ರಾಜನಿಗೆ ತಿಳಿಸಬೇಕಾಗಿತ್ತು. ಇಬ್ಬರು ಮಂತ್ರಿಗಳ ದೃಷ್ಟಿಯಲ್ಲಿಯೂ ಉತ್ತಮ ಕಾರ್ಯಸಾಧಕರೆಂದು ಆರಿಸಲ್ಪಟ್ಟವರಿಗೆ ರಾಜನು ಒಂದು ತಿಂಗಳ ಸಂಬಳವನ್ನು ಬಹುಮಾನವಾಗಿ ಕೊಡುವುದೆಂದು ನಿಶ್ಚಯಿಸಿದ್ದನು.

ಅದಕ್ಕಾಗಿ ನಿಯಮಿಸಲ್ಪಟ್ಟ ಮಂತ್ರಿಗಳಿಬ್ಬರೂ ಒಂದು ತಿಂಗಳವರೆಗೆ ಪ್ರತ್ಯ ಪತ್ಯೇಕವಾಗಿ ರಾಜಾಂಗದ ಉದ್ಯೋಗಸ್ಥರ ಕಾರ್ಯ ಕಲಾಪಗಳನ್ನು ಪರೀಕ್ಷೆ ಮಾಡ ತೊಡಗಿದರು. ಆಮೇಲೆ ಅವರನ್ನು ಕುರಿತು ತಮ್ಮ ಅಭಿಪ್ರಾಯಗಳನ್ನು ಬೇರೆ ಬೇರೆಯಾಗಿಯೇ ರಾಜನಿಗೆ ಸಮರ್ಪಿಸಿದರು. ರಾಜನು ಅದರಲ್ಲಿರುವ ವಿವರಣೆಗಳನ್ನು ಮನಸ್ಸುಗೊಟ್ಟು ಪರೀಶೀಲಿಸಿದನು. ರಾಜಾಂಗದ ಉದ್ಯೋಗಸ್ಥರಾಗಿ ಒಟ್ಟು ಇನ್ನೂರು ಮಂದಿ ಇದ್ದರು. ಗೋವಿಂದ ಮಂತ್ರಿಯು ದೃಷ್ಟಿಯಲ್ಲಿ ಕಾರ್ಯ ಶ್ರದ್ಧೆಯುಳ್ಳವರು ಐವತ್ತು ಮಂದಿ ಮಾತ್ರವೇ. ಆದರೆ ಈಶ್ವರ ಮಂತ್ರಿಯು ದೃಷ್ಟಿಯಲ್ಲಿ ನೂರೈವತ್ತು ಮಂದಿ ಒಳ್ಳೆಯ ಶ್ರದ್ಧೆಯುಳ್ಳವರೆಂದು ವಿವರಣೆಯಿದ್ದಿತು. ಇಬ್ಬರ ಅಭಿಪ್ರಾಯದಲ್ಲಿಯೂ ಶ್ರದ್ಧೆಯಿಂದ ಕೆಲಸಮಾಡುವವರು ಐದು ಮಂದಿ ಮಾತ್ರವೇ ಕಂಡುಬರುತ್ತಿದ್ದರು.

ರಾಜನು ಅವರಿಗೆ ಒಂದೊಂದು ತಿಂಗಳ ಸಂಬಳವನ್ನು ಬಹುಮಾನವಾಗಿ ಕೊಟ್ಟನು.

ಇದನ್ನು ನೋಡಿ ಉಳಿದ ಉದ್ಯೋಗಸ್ಥರಿಗೆ, ಒಂದು ಸಂಗತಿ ತಿಳಿಯ ಬೇಕೆನಿಸಿತು. " ಹಾಗಾದರೆ ಉಳಿದ ತೊಂಬತ್ತೈದು ಮಂದಿಗೆ ಕೆಲಸದಲ್ಲಿ ಶ್ರದ್ಧೆಯಿಲ್ಲವೆಂದು ಮಂತ್ರಿಗಳು ಏಕಗ್ರೀವರಾಗಿ ನಿರ್ಣಯಿಸಿದರೇನು ? " ಎಂದು ಉದ್ಯೋಗಸ್ಥರು ರಾಜನನ್ನು ಕೇಳಿದರು.

" ಹಾಗಿಲ್ಲ. ಒಬ್ಬ ಮಂತ್ರಿ ಕೆಲವರನ್ನೂ, ಇನ್ನೊಬ್ಬ ಮಂತ್ರಿ ಮತ್ತೆ ಕೆಲವರನ್ನೂ ಆರಿಸಿದ್ದಾರೆ.

" ವಸುಂಧರ "

ಅವರಿಬ್ಬರೂ ಆರಿಸಿಕೊಂಡವರಿಗೇ ಬಹುಮಾನ ಕೊಟ್ಟೆನು." ಎಂದನು ರಾಜ.

"ಅದು ಹೇಗೆ ನ್ಯಾಯವಾಗುತ್ತದೆ ಮಹಾ ಪ್ರಭು ?" ಎಂದು ಒಬ್ಬ ಉದ್ಯೋಗಸ್ಥನು ಕೇಳಿದನು.

"ಅದರಲ್ಲಿ ಲೋಪವಿದ್ದರೆ ಅದು ನಿಮ್ಮದೇ. ಒಬ್ಬ ಮಂತ್ರಿ ಮೆಚ್ಚಿದವನನ್ನು ಇನ್ನೊಬ್ಬ ಮಂತ್ರಿ ಮೆಚ್ಚಲಿಲ್ಲವೆಂದರೆ ಒಬ್ಬನ ಪರೀಕ್ಷೆಯಲ್ಲಿ ನಿಮ್ಮ ಶ್ರದ್ಧೆ ಕಡಮೆ ಯಾಗಿರಬೇಕು. ಆದ್ದರಿಂದಲೇ ಲೋಪ ನಿಮ್ಮದೇ ಎಂದೆನು" ಎಂದನು ರಾಜ. ರಾಜನ ಮಾತು ಯಾರಿಗೂ ಸಮಾಧಾನವನ್ನುಂಟು ಮಾಡಲಿಲ್ಲ.

ಆದರ ಮರುದಿನ ಚಿರಂಜೀವಿ ದೇಶಾಟನೆ ಮಾಡುತ್ತ ಆ ನಗರಕ್ಕೆ ಬಂದನು. ಮಹಾ ಜ್ಞಾನಿ ಎಂದು ಪ್ರಸಿದ್ಧನಾದ ಚಿರಂಜೀವಿ ಬಂದಿರುವ ಸಂಗತಿ ರಾಜನಿಗೆ ತಿಳಿಯಿತು. ಅವನು ಚಿರಂಜೀವಿಯನ್ನು ಪ್ರತ್ಯೇಕವಾಗಿ ರಾಜಭವನಕ್ಕೆ ಆಹ್ವಾನಿಸಿ, ಅತಿಥಿ ಸತ್ಕಾರಗಳನ್ನು ಮಾಡಿದನು. ಆಮೇಲೆ ಶ್ರದ್ಧಾಳುಗಳಾದ ಉದ್ಯೋಗಸ್ಥರಿಗೆ ಬಹುಮಾನ ಕೊಟ್ಟ ಬಗೆಗಳನ್ನು ರಾಜನು ಚಿರಂಜೀವಿಗೆ ವಿವರಿಸಿ ಹೇಳಿ, "ಒಬ್ಬ ಮನುಷ್ಯನ ಮೇಲೆ ಇಬ್ಬರನ್ನು ಪರೀಕ್ಷೆ ಮಾಡಲು ಇಟ್ಟು, ಅಭಿಪ್ರಾಯ ಹೇಳ ಬೇಕೆಂದರೆ, ಇಬ್ಬರೂ ಬೇರೆಬೇರೆ ಅಭಿಪ್ರಾಯ ಹೇಳಿದರೆ ಯಾರ ಅಭಿಪ್ರಾಯವನ್ನು ಸ್ವೀಕರಿಸಬೇಕು ?" ಎಂದು ಚಿರಂಜೀವಿಯನ್ನು ಕೇಳಿದನು.

ಚಿರಂಜೀವಿನಿ ನಕ್ಕು, "ಹಾಗೆ ಬೇರೆಬೇರೆ ಅಭಿಪ್ರಾಯ ಹೇಳಿದ ಪರೀಕ್ಷಕರಲ್ಲಿ ಒಬ್ಬನು ಶಿಕ್ಷಾರ್ಹನೆಂದು ನನಗೆ ಕಾಣುತ್ತದೆ" ಎಂದನು. ರಾಜನಿಗೆ ಏನೋ ಮಿಂಚಿನಂತೆ ಹೊಳೆಯಿತು. ಕೂಡಲೇ ಪ್ರತ್ಯೇಕ ವಿಚಾರಣೆಯೊಂದನ್ನು ನಡೆಯಿಸಿದನು. ಆಗ ಈಶ್ವರ ಮಂತ್ರಿ ಮುಂದಾಗಿಯೇ ತಮ್ಮ ಪರೀಕ್ಷೆಯನ್ನು ಕುರಿತು ಉದ್ಯೋಗಸ್ಥರಿಗೆ ಸೂಚನೆ ಕೊಟ್ಟಿದ್ದನು. ಅವರಿಂದ ಲಂಚವನ್ನು ಸ್ವೀಕರಿಸಿ ಲಂಚ ಕೊಟ್ಟವರ ಹೆಸರುಗಳನ್ನು ಮಾತ್ರ ತನ್ನ ನಿವೇದಿಕೆಯಲ್ಲಿ ಬರೆದಿದ್ದಾನೆಂದು ಗೊತ್ತಾಯಿತು. ಈಶ್ವರ ಮಂತ್ರಿಗೆ ಲಂಚ ಕೊಟ್ಟವರು ರಾಜನೊಂದಿಗೆ ಆ ಮಾತು ಹೇಳಲು ಭಯಪಟ್ಟರು. ತಮ್ಮ ಮೇಲೆ ಗೋವಿಂದ ಮಂತ್ರಿಯ ದೃಷ್ಟಿ ಇರುವ ಸಂಗತಿ ಅವರಿಗೆ ತಿಳಿಯದು. ಇಷ್ಟೊಂದು ಚಿಕ್ಕ ಸಂಗತಿ ತನಗೆ ಹೊಳೆಯದೆ ಹೋಯಿತೆಂದು ರಾಜನು ಚಿಂತಿಸಿ, ಗೋವಿಂದ ಮಂತ್ರಿ ಮೆಚ್ಚಿಕೊಂಡ ಉಳಿದ ನಲುವತ್ತೈದು ಮಂದಿಗೂ ಬಹುಮಾನ ಕೊಡಿಸಿದನು. ಈಶ್ವರ ಮಂತ್ರಿಗೂ, ಲಂಚ ಕೊಟ್ಟವರಿಗೂ ತಕ್ಕ ದಂಡನೆ ಕೊಡಿಸಿ, ಚಿರಂಜೀವಿಯನ್ನು ಗೌರವಿಸಿ ಸನ್ಮಾನಿಸಿ ಕಳುಹಿಸಿಕೊಟ್ಟನು.





# ಬದಲಾವಣೆ

ಪೂರ್ವಕಾಲದಲ್ಲಿ ಅಮರಾವತಿಯನ್ನು ಪಾಲಿಸುತ್ತಿದ್ದ ಶಿವಸೇನನೆಂಬ ರಾಜನು, ದಿನಾ ರಾಜಭವನದ ಮೇಲು ಭಾಗದಲ್ಲಿ ನಿಂತು ಕೆಳಗಿನ ದೃಶ್ಯವನ್ನು ನೋಡುತ್ತಾ ಇರುವನು.

ಹಾಗೆ ನೋಡುವಾಗ ಬೀದಿಯಲ್ಲಿ ಹೋಗುವ ಬಡ ಜನರೂ ಭಿಕ್ಷುಕರೂ ರಾಜನ ಹೃದಯವನ್ನು ಕರಗಿಸ ತೊಡಗಿದರು. ತನ್ನ ರಾಜ್ಯದಲ್ಲಿ ಬಡವರೂ ಭಿಕ್ಷುಕರೂ ಇಲ್ಲದ ಹಾಗೆ ಮಾಡಬೇಕೆಂದು ರಾಜನಿಗೆ ತೋರ ತೊಡಗಿತು. ಎಲ್ಲರೂ ಭೂಮಾಲಿಕರಾಗಬೇಕೆಂದಿಲ್ಲದಿದ್ದರೂ ಹೊಟ್ಟೆ ತುಂಬ ತಿಂಡಿ, ಮೈ ತುಂಬ ಬಟ್ಟೆ ಇಲ್ಲದೆ ಮನುಷ್ಯರಾಗಿರುವುದೆಂದರೆ ಎಂತಹ ಹೀನತನ !

ಇದಕ್ಕಾಗಿ ದೇಶದಲ್ಲಿ ದೊಡ್ಡ ಬದಲಾವಣೆ ಬರಬೇಕೆಂದೂ ಅಂತಹ ಬದಲಾವಣೆಗೆ ತಕ್ಕ ಅವಕಾಶವಾಗುವಂತಹ ಪಥಕವನ್ನು ಆಲೋಚಿಸಬೇಕೆಂದೂ ಶಿವಸೇನನು ತನ್ನ ಮಂತ್ರಿಯನ್ನು ಕೇಳಿದನು.

ಮಂತ್ರಿ ಸ್ವಲ್ಪ ಹೊತ್ತು ಆಲೋಚನೆಮಾಡಿ, "ನಿಮ್ಮ ಆಲೋಚನೆ ಒಳ್ಳೆಯದೇ. ದಾರಿದ್ರ್ಯವು ದೊಡ್ಡದಾಗಿಯೇ ಕೊನೆಗೆ ಭಿಕ್ಷುಕರನ್ನು ಸೃಷ್ಟಿಸುತ್ತದೆ. ಆ ದಾರಿದ್ರ್ಯಕ್ಕೆ ಮೂಲಕಾರಣಗಳೇನೆಂದು ಆಲೋಚಿಸಬೇಕು. ಅಷ್ಟೇ ಹೊರತು ದಾರಿದ್ರ್ಯದಿಂದ ಭಿಕ್ಷುಕನಾದ ಪ್ರತಿಯೊಬ್ಬನಿಗೂ ಧನಸಹಾಯ ಮಾಡುತ್ತಾ ಹೋದರೆ ಅದು ಬೂದಿಯಲ್ಲಿ ಸುರಿದ ಪನ್ನೀರಾಗಬಹುದು ಪ್ರಭು " ಎಂದನು.

"ದಾರಿದ್ರ್ಯದ ಮೂಲಕಾರಣವು ಏನೇ ಇದ್ದರೂ, ದಾರಿದ್ರ್ಯವು ಮಾತ್ರ ಸಹಿಸಲಾಗುವಂತಹುದಲ್ಲ. ಅದನ್ನು ತೊಲಗಿಸುವುದರಿಂದ ಒಳ್ಳೆಯದೇ ಆಗುತ್ತದೆ, ಆಗಲೇ ಬೇಕು. ದಾರಿದ್ರ್ಯವಿಲ್ಲದ ಒಳ್ಳೆಯ ದೇಶವೇ ನಮ್ಮದಾಗಬೇಕು." ಎಂದನು ರಾಜ ಹಟ ಹಿಡಿದವನಂತೆ.

"ಮಹಾರಾಜರೇ, ಹಣವು ಎಲ್ಲಾ ಸಮಸ್ಯೆಗಳನ್ನೂ ಪರಿಹರಿಸುತ್ತದೆಂದು ಹೇಳಲಿಕ್ಕಾಗದು. ಧನದಿಂದ ಒಳ್ಳೇದಾಗುವವರೂ ಇರುತ್ತಾರೆ; ಕೆಟ್ಟು ಹೋಗುವವರೂ ಇರುತ್ತಾರೆ, ಈ ಮಾತು ದರಿದ್ರರಿಗೆ ಮಾತ್ರ ಅನ್ವಯಿಸುವುದೇನಲ್ಲ; ಧನಿಕರಲ್ಲಿ ಕೂಡಾ ಧನದಿಂದ ಕೆಟ್ಟುಹೋಗುವವರು ಅನೇಕರಿದ್ದಾರೆ" ಎಂದನು ಮಂತ್ರಿ. "ನಾನು ನಂಬಲಾರೆ, ನಿಮ್ಮ ಮಾತು ಧನಿಕರಿಗೆ ಅನ್ವಯಿಸುವುದಾದರೂ ದರಿದ್ರರಿಗೆ ಅನ್ವಯಿಸದು.

ವಿ. ವೆಂಕಪ್ಪ



ಯಲ್ಲಿ ಮುಳುಗಿಹೋಗಿ, ಅದನ್ನು ಸರಿಪಡಿಸಿಕೊಳ್ಳಲು ಹಣವಿಲ್ಲದೆ, ಕೂಲಿ ಕೆಲಸಮಾಡುತ್ತ ಬದುಕಲು ನಗರಕ್ಕೆ ಬಂದಿದ್ದಾನಂತೆ.

ಮೂರನೇಯವನು ಹಣ್ಣುಗಳ ವ್ಯಾಪಾರಮಾಡು ವವನು. ಬಹಳ ಕಾಲದಿಂದ ಸೇರಿಸಿಟ್ಟ ಹಣವನ್ನು ಖರ್ಚುಮಾಡಿ ತಂಗಿಗೆ ಮದುವೆ ಮಾಡಿದ್ದನು. ತರುವಾಯ ಅವನ ತಂದೆಗೆ ಕಾಯಿಲೆ ಬಂತು. ವ್ಯಾಪಾರಮಾಡಲು ಸಾಧ್ಯವಾಗದೆ, ತಂದೆಯ ಚಿಕಿತ್ಸೆಗಾಗಿ ಊರೂರು ತಿರುಗುತ್ತ ಚಿಕಿತ್ಸೆ ನಡೆಸಿ ಕೈಯಲ್ಲಿದ್ದ ಹಣವನ್ನೆಲ್ಲಾ ಕಳೆದುಕೊಂಡು ಬಿಕಾರಿ ಯಾದನು. ತಂದೆ ಸತ್ತೂಹೋದನು. ಅವನಿಗೆ ತಾಯಿಯೂ ಇನ್ನೊಬ್ಬಳು ತಂಗಿಯೂ ಇದ್ದಾರೆ. ಚಿಕ್ಕದೊಂದು ಮನೆಯೂ ಇದೆ. ಆದರೆ ಹಳ್ಳಿಗಳಲ್ಲಿ ಈಗ ಕೆಲಸವೇನಿಲ್ಲ. ಆದುದರಿಂದ ಕೂಲಿ ಕೆಲಸವೇನಾದರೂ ಮಾಡೋಣವೆಂದು ನಗರಕ್ಕೆ ಬಂದಿದ್ದಾನೆ. ಇನ್ನೂ ಕೆಲಸವೇನೂ ಸಿಕ್ಕಿಲ್ಲ. ನಾಲ್ಕನೇಯವನ ತಂದೆ ಸತ್ತುಹೋದ ಕಾಲಕ್ಕೆ ಹತ್ತು ಎಕರೆ ಜಮೀನು ಅವನಿಗಿತ್ತು. ಆದರೆ ಅವನು ಕಷ್ಟಪಟ್ಟು ದುಡಿಯಲು ಇಷ್ಟವಿಲ್ಲದೆ, ಸೋಮಾರಿಯಾಗಿ ಕಾಲ ಕಳೆಯುತ್ತ, ಕುಡಿತ ಜೂಜುಗಳಿಂದ ಎಲ್ಲವನ್ನೂ ಕಳೆದುಕೊಂಡನು. ಹೆಂಡತಿ ಅವನನ್ನು ಬಿಟ್ಟು ತೌರಿಗೆ ಹೋದಳು. ಈಗ ಭಿಕ್ಷೆ ಬೇಡಿ ಬದುಕಲು ನಗರಕ್ಕೆ ಬಂದಿದ್ದಾನೆ.

ಹೀಗೆ ಮಾತುಕತೆಯಾಡಿದ ಮೇಲೆ ಎಲ್ಲರೂ ಮಲಗಿ ನಿದ್ದೆಗೆ ಇಳಿದರು. ರಾಜನೂ ಮಂತ್ರಿಯೂ ಎದ್ದು ಆ ನಾಲ್ವರ ಜೇಬುಗಳಲ್ಲಿಯೂ ಒಂದೊಂದು ಚಿನ್ನದ ತುಂಡನ್ನು ಹಾಕಿ ಹೊರಟು ಹೋಗಿಬಿಟ್ಟರು. ಬೆಳಗಾದ ಕೂಡಲೇ ನಾಲ್ವರು ಬಡವರೂ ಎದ್ದು ತಮ್ಮ ಜೇಬಿನಲ್ಲಿರುವ ಭಾರವಾದ ಚಿನ್ನದ ತುಂಡನ್ನು ನೋಡಿ ಸಂತೋಷಪಟ್ಟರು.

ಅವರಲ್ಲಿ ರೈತನೂ ಹಣ್ಣಿನ ವ್ಯಾಪಾರಿಯೂ ತಮ್ಮ ಗ್ರಾಮಗಳಿಗೆ ಹಿಂದಿರುಗಿ, ಚಿನ್ನವನ್ನು ಮಾರಿ

ಬೇಕಾದರೆ ಕೆಲಮಂದಿ ದರಿದ್ರರಿಗೆ ಧನಸಹಾಯ ಮಾಡಿ, ಅವರಿಗೆ ಒಳಿತಾಗುವುದೋ ಕೆಡುಕಾಗು ವುದೋ ನೋಡೋಣ" ಎಂದನು ರಾಜ. ಆ ದಿನ ರಾತ್ರಿ ರಾಜನೂ ಮಂತ್ರಿಯೂ ವೇಷ ಬದಲಾಯಿಸಿ ಕೊಂಡು ನಗರದ ಹೊರಗಿರುವ ಸತ್ರಕ್ಕೆ ಹೋದರು.

ಅಲ್ಲಿ ನಾಲ್ಕುಮಂದಿ ಬಡಜನರು ಕುಳಿತುಕೊಂಡು ಏನೋ ಮಾತಾಡಿಕೊಳ್ಳುತ್ತಿದ್ದರು. ರಾಜನೂ ಮಂತ್ರಿಯೂ ಅವರಿಗೆ ಸಮೀಪವಾಗಿ ಕುಳಿತು ಕೊಂಡು ಮೆಲ್ಲಗೆ ಅವರ ಮಾತಿನಲ್ಲಿ ಬಾಯಿ ತೂರಿಸಿ, ಅವರ ಸ್ಥಿತಿಗತಿಗಳನ್ನು ಕುರಿತು ಕೇಳಿದರು.

ಅವರಲ್ಲಿ ಮೊದಲನೇಯವನು ಭಿಕ್ಷುಕ ಮತ್ತು ಅವನ ಮಗ. ಈ ಮಗ ಹುಟ್ಟಿದ ಮೇಲೆ ಅವನ ತಾಯಿ ತೀರಿಹೋದಳಂತೆ. ತಂದೆಯೂ ಮಗನೂ ಭಿಕ್ಷೆ ಎತ್ತಿಕೊಂಡೇ ಜೀವಿಸುತ್ತಿದ್ದಾರೆ.

ಎರಡನೇಯವನು ಬಡರೈತ. ಅವನಿದ್ದ ಸ್ವಲ್ಪ ಮಾತ್ರವಾದ ಹೊಲವು ಕಳೆದ ವರ್ಷ ಬಂದ ನೆರೆ

ಬಂದ ಹಣದಿಂದ ತಮ್ಮ ವೃತ್ತಿಗಳನ್ನು ಸರಿದಾರಿಗೆ ತಂದುಕೊಂಡು ಲಾಭದಾಯಕವಾಗಿ ಜೀವನ ಸಾಗಿಸಲು ತೊಡಗಿದರು.

ಕುಡುಕನೂ ಜೂಜುಗಾರನೂ ಆದವನು ಆ ಚಿನ್ನದಿಂದ ಬಂದ ಹಣದಿಂದ ಮತ್ತೆ ಅದೇ ಕುಡಿತ ಜೂಜುಗಳನ್ನೇ ಭರದಿಂದ ಸಾಗಿಸಿ, ಎಲ್ಲವನ್ನೂ ಕಳೆದುಕೊಂಡು ಮತ್ತೆ ಬರಿಗೈ ಬಂಟನಾಗಿ ಧರ್ಮ ಛತ್ರಗಳ ಆಶ್ರಯಕ್ಕೇ ಬಂದನು.

ಭಿಕ್ಷುಕನಿಗೆ ಮಾತ್ರ ಆ ಚಿನ್ನವನ್ನು ಏನು ಮಾಡಬೇಕೆಂದು ತೋರಲಿಲ್ಲ. ಅವನ ವೃತ್ತಿಗೂ ಆ ಚಿನ್ನಕ್ಕೂ ಯಾವ ಸಂಬಂಧವೂ ಇರಲಿಲ್ಲ. ಅವನು ಹತ್ತಾರು ಮನೆ ತಿರುಗಿ ಹೊಟ್ಟೆ ತುಂಬಿಸಿಕೊಂಡು ಬಿಡುತ್ತಾನೆ. ಅವನ ಜೀವನದ ಗಾಡಿ ಹಾಗೆಯೇ ಸಲೀಸಾಗಿ ಸಾಗುವಾಗ ಈ ಚಿನ್ನವನ್ನು ಏನು ತಾನೇ ಮಾಡುವನು ?

ಅದನ್ನು ಯಾರಿಗಾದರೂ ಮಾರೋಣವೆಂದರೆ ಸಾವಿರ ಪ್ರಶ್ನೆಗಳನ್ನು ಮಾಡಿ ಅವರಿಗೆ ಕಳ್ಳತನದ ಅಪವಾದ ಅಂಟಿಸಲೂ ಬಹುದು. ಕಳ್ಳನೆಂದಾಗಿಬಿಟ್ಟರೆ ಭಿಕ್ಷೆಯೂ ಸಿಕ್ಕದು. ಆದುದರಿಂದ ಅವನು ಆ ಚಿನ್ನದ ನಾಣ್ಯವನ್ನು ಸತ್ರದ ಗೋಡೆಯ ಹತ್ತಿರ ಹುಗಿದಿಡೋಣವೆಂದು ಮಧ್ಯ ರಾತ್ರಿಯಲ್ಲಿ ಹೊಂಡ ತೆಗೆಯ ತೊಡಗಿದನು.

ಅಷ್ಟರಲ್ಲಿ ರಾಜಭಟರು ಕಳ್ಳನೊಬ್ಬನನ್ನು ಓಡಿಸುತ್ತ ಹಾಗೆ ಬಂದು ಆ ಭಿಕ್ಷುಕನೇ ಕಳ್ಳನೆಂದುಕೊಂಡು ಹಿಡಿದು, ಅವನ ಕೈಯಲ್ಲಿದ್ದ ಚಿನ್ನದ ತುಂಡನ್ನು ನೋಡಿ, ಅವನನ್ನು ರಾಜನ ಬಳಿಗೆ ಎಳೆದುಕೊಂಡು ಹೋದರು. ರಾಜನೂ ಮಂತ್ರಿಯೂ ಆ ಭಿಕ್ಷುಕನ ಗುರುತು ಹಿಡಿದು, ಏನೂ ಮಾಡದೆ ಸುಮ್ಮನೆ ಬಿಟ್ಟುಬಿಟ್ಟರು.

ಉಳಿದ ಮೂವರ ಸಂಗತಿಯನ್ನು ಕುರಿತು ಶೋಧನೆ ನಡೆಸಿದಾಗ, ತಮ್ಮ ವೃತ್ತಿ ನಡೆಸಿಕೊಂಡಿದ್ದವರು ಕಾರಣಾಂತರಗಳಿಂದ ಬಡವರಾದರೂ, ಧನ ಸಹಾಯದಿಂದ ಒಳ್ಳೆಯ ಸ್ಥಿತಿಗೆ ಬಂದರೆಂದೂ, ಯಾವ ವೃತ್ತಿಯನ್ನೂ ಮಾಡದವರು ಧನ ಸಹಾಯದಿಂದ ಯಾವ ಪ್ರಯೋಜನವನ್ನೂ ಪಡೆಯಲಾರರೆಂದೂ ಗೊತ್ತಾಯಿತು.

ಮಂತ್ರಿ ರಾಜನೊಂದಿಗೆ, "ಮಹಾರಾಜರೆ, ದರಿದ್ರರನ್ನೆಲ್ಲ ಒಂದೇ ದೃಷ್ಟಿಯಿಂದ ನೋಡಿ ಲೆಕ್ಕ ಮಾಡುವಂತಿಲ್ಲ. ನಿಜವಾದ ದರಿದ್ರನು ಖರ್ಚು ಮಾಡಲು ಹಣವಿಲ್ಲದವನು ಅಲ್ಲ, ಉತ್ಪನ್ನತೆಯನ್ನು ಮುಂದುವರಿಸಲು ತಕ್ಕ ಶಕ್ತಿ ಇಲ್ಲದವನು. ಅಂಥವರಿಗೆ ಮಾತ್ರ ಧನ ಸಹಾಯ ಮುಟ್ಟಿದರೆ ಮೇಲಾಗುತ್ತದೆ." ಎಂದನು. ರಾಜನು ಮಂತ್ರಿಯ ಮಾತಿಗೆ ಒಪ್ಪಿ ತಲೆದೂಗಿದನು.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

### ಗೆದ್ದ ಶೀರ್ಷಿಕೆಗಳು ೧೯೮೪ ಅಕ್ಟೋಬರ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ



P. Sundaram

★



B. Bhansali

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.

★ ಆಗಸ್ಟ್ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.

★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.

★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು - ೬೦೦೦೨೬

---

### ಜೂನ್ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ: **ನನ್ನಾ ಸರಿಯಲ್ಲಿ ನೀನು**

ಎರಡನೇ ಫೋಟೋ : **ನಿನ್ನಾ ಸರಿಯಲ್ಲಿ ನಾವು**

ಕಳುಹಿಸಿದವರು : **ನಟೇಶಕುಮಾರ್ ದೇಸಾಯಿ,**

ಸೊರಬದ ಮಠದ ಗಲ್ಲಿ, ಗಿಣಿಮಾವಭಾಳ, ಹುಬ್ಬಳ್ಳಿ–೨೦

**Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 2 & 3, Arcot Road, Madras-600 026 (India). Controlling Editor : NAGI REDDI.**

ಅತಿ ಸ್ವಲ್ಪ ಖರ್ಚಿನಲ್ಲಿ
ಅತ್ಯಧಿಕ ಬಟ್ಟೆಗಳನ್ನು
ಒಗೆಯಿರಿ.




ತಯಾರಕರು ಶ್ರೀ ರಾಮಕೃಷ್ಣ ಆಯಿಲ್ ಮಿಲ್ಸ್
ಮಂಗಳೂರು.



# ಕರಡಿ ಕೆಂಗಣ್ಣ

## ೧೩

[ದುರ್ಮುಖರಾಜನು ಎಲ್ಲದಕ್ಕೂ ಸಿದ್ಧನಾಗಿ ತನ್ನ ರಾಜ್ಯವನ್ನು ಆಕ್ರಮಿಸಿದ ಸಾಮಂತನನ್ನು ಓಡಿಸುತ್ತ ಕೋಟೆಯೊಳಗೆ ಹೊಕ್ಕನು. ಕೋಟೆಯ ಬಾಗಿಲನ್ನು ಭೇದಿಸಲು, ಕಟುಕಕರಡಿಯವನೂ ಉಗ್ರದಂಡನೂ ಪ್ರಯತ್ನಿಸುತ್ತಿರುವಾಗ, ಮಾಯಾ ಮರ್ಕಟವೊಂದು ಹೊಸತಾಗಿ ತೋರಿತು. ಅದು ಕಾಳೀವರ್ಮನೂ ಕರಡಿ ಕೆಂಗಣ್ಣ ಮಾಂತ್ರಿಕನೂ ಅಲ್ಲಿಗೆ ಬರುವುದನ್ನು ತೋರಿಸಿ, ಕೋಟೆಯ ಗೋಡೆಯಿಂದ ಒಳಗಡೆಗೆ ಧುಮುಕಿತು.]

**ಮಾ**ಯಾ ಮರ್ಕಟನ ಮಾತು ಕೇಳಿ ಕಟುಕ ಕರಡಿಯವನು ಬೆರಗಾಗಿ ಮರ್ಕಟನು ತೋರಿಸಿದ ಕಡೆಗೆ ನೋಡಿದನು. ನಿಜವೇ ! ಕಾಳೀವರ್ಮನೂ, ಮಹಾ ಗುರು ಕರಡಿ ಕೆಂಗಣ್ಣ ಮಾಂತ್ರಿಕನೂ ಅತ್ತ ಕಡೆಯಿಂದ ಬರುತ್ತಿದ್ದರು. ಅವರನ್ನು ನೋಡಿದ ಉತ್ಸಾಹದಲ್ಲಿ ನರಭಲ್ಲೂಕನು ಹಾರಿಕುಣಿದು, ತನ್ನ ಚಪಗೊಡಲಿಯನ್ನು ಗಿರಗಿರನೆ ತಿರುಗಿಸುತ್ತ, "ಆಹಾ ! ಅಯ್ಯಗಳಿರಾ ! ಎಷ್ಟುದಿನಗಳ ತರುವಾಯ ನಿಮ್ಮಿಬ್ಬರ ದರ್ಶನ ಭಾಗ್ಯಲಭಿಸಿತು! ಇನ್ನು ನನ್ನ ಎಲ್ಲಾ ಕಷ್ಟಗಳೂ ತೀರಿದಂತಾಯಿತು ! ಜೈ ಭೈರವಾ !" ಎಂದು ಚಪಗೊಡಲಿಯನ್ನು ಆಕಾಶಕ್ಕೆ ಹಾರಿಸಿ ಹಿಡಿದನು. ಆಗ ಕರಡಿ ಕೆಂಗಣ್ಣ ಮಾಂತ್ರಿಕನು ಕೋಣವಾಹನದ ಮೇಲಿನಿಂದ ಕೆಳಗಿಳಿದು, ಕಟುಕಭಲ್ಲೂಕನ ಬಳಿಗೆ ಬಂದು " ಎಲೋ ನರಭಲ್ಲೂಕಾ ! ಆನಂದದಿಂದ ಉಬ್ಬಿಗಿಬ್ಬಿ ಹೋಗಬೇಡ. ಆ ಮಾಯಾ ಮರ್ಕಟನನ್ನು ಸರಿಯಾಗಿ ನೋಡು. ಆ ರೂಪದಲ್ಲಿ ಬಂದವನು ನಿಜವಾದ ಕೋತಿಯಲ್ಲ. ಅವನು ಮಿಥ್ಯಾ ಮಿಶ್ರನೆಂಬ ಮಹಾ ತಾಂತ್ರಿಕನ ಶಿಷ್ಯನಾದ ಭ್ರಾಂತಿಮತಿ. ಅವನು ನನ್ನ ಮಂತ್ರದಂಡವನ್ನು ಕದ್ದುಕೊಂಡು ಬಂದಿದ್ದಾನೆ. ಮೊದಲು ನಾವು ನನ್ನ



ಮಂತ್ರದಂಡವನ್ನು ವಶಪಡಿಸಿಕೊಳ್ಳಬೇಕು. ಅದು ಬಹಳ ಮುಖ್ಯ." ಎಂದನು.

ಅದಕ್ಕೆ ಏನು ಉತ್ತರ ಕೊಡಲೂ ತೋರದೆ ಕಟುಕ ಕರಡಿಯವನು "ಓಹೋ!" ಎಂದು ತಲೆಯಾಡಿಸಿದನು. ಇಷ್ಟರಲ್ಲಿ ರಾಕ್ಷಸನನ್ನೂ ಆನೆಗಳನ್ನೂ ನೋಡಿ ಆಶ್ಚರ್ಯಪಡುತ್ತಿದ್ದ ಕಾಳೀವರ್ಮನು, "ಎಲೋ, ಕರಡಿಯಾಗಿ ನಿಂತ ಕಟುಕ ವೃತ್ತಿಯವನೇ, ಸಾಮಾನ್ಯ ಮಾನವನಾಗಿದ್ದ ನೀನು ಈ ರಾಕ್ಷಸನನ್ನೂ ಆನೆಗಳನ್ನೂ, ಈ ಪರಿವಾರಗಳನ್ನೂ ಹೇಗೆ ಸಂಪಾದಿಸಿಕೊಂಡೆಯೋ? ಆಶ್ಚರ್ಯವಾಗಿದೆಯಲ್ಲಾ!" ಎಂದನು.

ಕಾಳೀವರ್ಮನ ಮಾತು ಕೇಳಿ ಉಗ್ರದಂಡ ರಾಕ್ಷಸನು ಸಣ್ಣಗೆ ನಕ್ಕು "ನೀನೇ ಅಲ್ಲವೇ ಕಾಳೀವರ್ಮನೆಂಬ ಕ್ಷತ್ರಿಯ ವೀರ? ನಿನ್ನನ್ನು ಕುರಿತು ಕಟುಕಭಲ್ಲೂಕನು ಹೇಳಿದುದನ್ನು ಕೇಳಿದ್ದೇನೆ. ಕರಡಿ ಕೆಂಗಣ್ಣ ಮಾಂತ್ರಿಕರೆಂದರೆ ಇವರೇ ಏನು?" ಎಂದು ದೂರದಲ್ಲಿ ನಿಂತಿದ್ದ ಚಂದ್ರಶಿಲಾ ನಗರದ ಮಂತ್ರಿಯನ್ನೂ ಅವನೊಂದಿಗಿದ್ದ ಕೆಲ ಮಂದಿ ಅಶ್ವಿಕರನ್ನೂ ಸೈನಿಕರನ್ನೂ ಕಾಳೀವರ್ಮನಿಗೆ ತೋರಿಸುತ್ತ, "ಅಲ್ಲಿ ನೋಡಿದೆಯಾ ಕಾಳೀವರ್ಮಾ? ಮನುಷ್ಯರ ಮಧ್ಯಕ್ಕೆ ಬಂದ ರಾಕ್ಷಸನಾದ ನನ್ನನ್ನು ನೋಡಿ ಆಶ್ಚರ್ಯಪಡುವುದನ್ನು ಬದಿಗಿಟ್ಟು, ನಿನ್ನನ್ನು ಹಿಡಿಯಲು ಬಂದ ಆ ಸೈನಿಕರನ್ನು ನೋಡು. ಚಂದ್ರಶಿಲಾ ನಗರದ ಜಿತಕೇತು ರಾಜನು ಕಳುಹಿಸಿದ್ದಾನಂತೆ. ಮಾಯಾ ಮರ್ಕಟನು ಈ ಸಂಗತಿ ಹೇಳಿದುದರಿಂದ ನನಗೆ ಗೊತ್ತಾಯಿತು. ನಿನ್ನ ಮೇಲೆ ಬರುವ ಈ ಅಪಾಯದಿಂದ ಹೇಗೆ ಪಾರಾಗುವಿಯೋ? ಯಾವುದಕ್ಕೂ ಎಚ್ಚರವಾಗಿರಯ್ಯ." ಎಂದನು.

ಕಾಳೀವರ್ಮನು ತನ್ನ ಕುದುರೆಯನ್ನು ಹಿಂದಕ್ಕೆ ತಿರುಗಿಸಿ, ಕತ್ತಿಯನ್ನು ಸೆಳೆದುಕೊಂಡು ಉಗ್ರದಂಡ ರಾಕ್ಷಸನನ್ನು ನೋಡಿ, "ನಿನ್ನ ಹೆಸರೇನೋ ನನಗೆ ಗೊತ್ತಿಲ್ಲ. ಇಲ್ಲಿ ಸೇರಿರುವ ಇಷ್ಟು ಮಂದಿಗೆಲ್ಲಾ ನಾಯಕನು ಯಾರು? ರಾಕ್ಷಸನಾಗಿರುವ ನೀನೇಯೋ, ಅಲ್ಲಾ ಕರಡಿಯಾದ ಕಟುಕನೋ?" ಎಂದು ಕೇಳಿದನು.

ಆ ಪ್ರಶ್ನೆಗೆ ಉಗ್ರದಂಡ ರಾಕ್ಷಸನು ಉತ್ತರ ಕೊಡುವುದರೊಳಗೆ, ಕಟುಕಕರಡಿಯವನು "ಜೈ ಭೈರವಾ!" ಎಂದು ಗಟ್ಟಿಯಾಗಿ ಕೂಗಿ, "ಕಾಳೀವರ್ಮ ದೊರೇ! ಈ ಉಗ್ರದಂಡನೆಂಬ ರಾಕ್ಷಸನಿಗೂ ಕಳ್ಳರ ನಾಯಕ ನಾಗಮಲ್ಲನಿಗೂ, ದುರ್ಮುಖನ ಅಂಗರಕ್ಷಕರಿಗೂ ಎಲ್ಲರಿಗೂ ಈಗ ನಾಯಕನು ನಾನೇ! ನನಗೆ ನೀವು. ಏನು ಮಾಡಬೇಕೋ ನನಗೇ ನಿಮ್ಮ ಅಪ್ಪಣೆಯಾಗಲಿ. ನಾನು ನೆರವೇರಿಸಿಬಿಡುತ್ತೇನೆ." ಎಂದನು.

ಇದನ್ನೆಲ್ಲ ನೋಡುತ್ತ, ಪರೀಕ್ಷಿಸಿ ತಲೆಯಾಡಿಸಿಕೊಂಡಿದ್ದ ಕರಡಿ ಕೆಂಗಣ್ಣನೊಂದಿಗೆ ಕಟುಕಕರಡಿಯವನು, "ಗುರುಗಳೇ! ನಿಮ್ಮ ಪ್ರೀತಿಯ ಶಿಷ್ಯ

ನಾನು ! ನನಗೆ ಏನು ಆಜ್ಞೆ ಮಾಡುವಿರೋ ಮಾಡಿರಿ ! ಒಂದು ಸಾರಿ ತಮ್ಮ ಶಕ್ತಿ ಎಂತಹುದೆಂದು ನೋಡಿದ ಆ ಮಾಂತ್ರಿ ಜೀವಗುಪ್ತನು ನಮ್ಮ ಮೇಲೆ ದಾಳಿಮಾಡುವನೆಂದು ನನಗೆ ತೋರುವುದಿಲ್ಲ. ನೋಡಿದಿರಾ, ದೂರದಲ್ಲೇ ಕುದುರೆಯ ಮೇಲೆ ನೋಡುತ್ತ ಹೇಗೆ ನಡುಗುತ್ತಿದ್ದಾನೆ ಥರಥರನೆ !" ಎಂದನು.

ಕರಡಿ ಕೆಂಗಣ್ಣನು ಮುಚ್ಚಿರುವ ಕೋಟೆಯ ಬಾಗಿಲನ್ನು ನೋಡಿ ನಿರುತ್ಸಾಹದಿಂದ, "ನನ್ನ ಗುರುವನ್ನೇ ಇಕ್ಕಟ್ಟಿಗೆ ಸಿಕ್ಕಿಸಿದ ಕೆಟ್ಟ ತಾಂತ್ರಿಕನ ಶಿಷ್ಯನಾದ ಈ ಮಾಯಾ ಮರ್ಕಟನು, ನನ್ನನ್ನೇ ಹೊಂಚು ಹಾಕುವನೆಂದು ತಿಳಿಯದೆ ನನ್ನ ಮಂತ್ರ ದಂಡವನ್ನು ಕಳೆದುಕೊಂಡೆ. ಇವನೊಬ್ಬ ನನ್ನ ಬೆನ್ನ ಹಿಂದೆ ಕಾಯುತ್ತಿದ್ದಾನೆಂದು ಸಂದೇಹವಾದರೂ ಇರುತ್ತಿದ್ದರೆ, ಮಂತ್ರದಂಡವನ್ನು ನದಿಯ ಬದಿಯ ಮರಕ್ಕೆ ಒರಗಿಸಿಟ್ಟು ಸ್ನಾನಕ್ಕೆ ಇಳಿಯುತ್ತಿರಲಿಲ್ಲ. ಇನ್ನು ಹೇಗೋ ತಿಳಿಯದಲ್ಲ! ಅದೊಂದಿರುತ್ತಿದ್ದರೆ!" ಎಂದನು ತನಗೆ ತಾನೇ.

ಅದನ್ನು ಕೇಳಿಕೊಂಡ ಕಟುಕಕರಡಿಯುವನು ತನ್ನ ಚಪಗೊಡಲಿಯನ್ನು ತನ್ನ ಅಂಗೈಯ ಮೇಲಿಟ್ಟು ಕೆಂಗಣ್ಣ ಮಾಂತ್ರಿಕನ ಮುಂದೆಬಂದು, "ಅಯ್ಯಾ, ಮಹಾಮಾಂತ್ರಿಕ ಪ್ರಭುಗಳೇ ! ಆ ಮಂತ್ರದಂಡವು ಕೈ ತಪ್ಪಿ ಹೋಯಿತೆಂದು ಚಿಂತಿಸಬೇಡಿರಿ. ಈ ಚಪ ಗೊಡಲಿ ಕೂಡಾ ಮಂತ್ರ ಪ್ರಭಾವವಿರುವಂಥಾದ್ದು ತಾನೇ ? ಇದರ ಪ್ರಭಾವಕ್ಕೆ ಉಗ್ರದಂಡನಂಥ ರಾಕ್ಷಸನೇ ಹೆದರಿ ನಡುಗುತ್ತಾನೆ. ಇದನ್ನು ತೆಗೆದು ಕೊಂಡು ನನ್ನನ್ನು ಕೂಡಲೇ ಮನುಷ್ಯನನ್ನಾಗಿ ಮಾಡಿಬಿಡಿ ! ಈ ಕರಡಿಭಾರ ಸಾಕೋಸಾಕಾಯಿತು ! ಇನ್ನು ತಾಳಲಾರೆ !" ಎಂದನು.

"ಹೌದಪ್ಪಾ, ನಿನ್ನ ಗೊಡವೇನೇ ಹೇಳಿಕೊಂಡ ರಾಯಿತೇ ? ನೀನು ನಿನ್ನ ಗುರುವಿಗೆ ತಂದು



ಸಮರ್ಪಿಸಬೇಕಾಗಿದ್ದ ದುರ್ಮುಖರಾಜನ ತಲೆಯ ವಿಷಯವೇನಾಯಿತು ? ಕೋಟೆಯೊಳಗೆ ಹೊಕ್ಕ ಆ ರಾಜನ ತಲೆ ಇಷ್ಟು ಹೊತ್ತಿಗೆ ಆ ಸಾಮಂತ ಸೂರ್ಯ ಭೂಪತಿಯ ಕತ್ತಿಯಿಂದ ಛಿನ್ನಾಭಿನ್ನ ವಾಗಿರಬಹುದು." ಎಂದು ನೆನಪು ಮಾಡಿದನು ಉಗ್ರದಂಡ ರಾಕ್ಷಸ.

ದುರ್ಮುಖರಾಜನ ಹೆಸರು ಕೇಳುತ್ತಲೇ ಕರಡಿ ಕೆಂಗಣ್ಣ ಮಾಂತ್ರಿಕನು ಅದುರಿಬೀಳುತ್ತ "ಎಲೋ ನರಭಲ್ಲೂಕಕಟುಕಾ ! ಆ ರಾಜ ಇನ್ನೂ ಬದುಕಿಯೇ ಇದ್ದಾನೇನು ? ಸಾಮಂತ ಸೂರ್ಯಭೂಪತಿ ಎಂದರೆ ಯಾರವನು ? ಕೋಟೆಯೊಳಗೆ ಯುದ್ಧ ಯಾರು ಯಾರೊಳಗೆ ನಡೆಯುತ್ತದೆ ? ಏನಿದೆಲ್ಲಾ ? ದುರ್ಮುಖರಾಜನು ಹೇಗೆ ನಿನ್ನನ್ನು ತಪ್ಪಿಸಿ ಕೋಟೆ ಯೊಳಗೆ ಹೊಕ್ಕ ?" ಎಂದು ಕೇಳಿದನು.

ಕಟುಕಕರಡಿಯುವನು ಕೆಲವು ಮಾತುಗಳಲ್ಲಿ, ತಾನು ದುರ್ಮುಖರಾಜನ ಹಿಂದೆಬಿದ್ದು ಅರಣ್ಯಕ್ಕೆ ಹೋದಾಗಿ



ನಿಂದ ಆಕ್ಷಣದವರೆಗೆ ನಡೆದ ಸಂಗತಿಯನ್ನೆಲ್ಲಾ ಹೇಳಿ. "ಮಾಂತ್ರಿಕ ಪ್ರಭುಗಳೇ! ಆ ರಾಜನು ನಾವು ಅಂದುಕೊಂಡಷ್ಟು ಕೆಟ್ಟವನಾಗಿ ಕಾಣುವುದಿಲ್ಲ. ಆಮೇಲೆ ನಿಮ್ಮ ಇಷ್ಟ. ಮೊದಲು ನನ್ನನ್ನು ಮನುಷ್ಯನನ್ನಾಗಿ ಬದಲಾಯಿಸಿಬಿಡಿ. ಈ ರೋಮಮಯ ಕರಡಿಯ ಚರ್ಮದೊಳಗೆ ಧಾವೆಯ ಉಷ್ಣವನ್ನು ತಡೆಯಲಾಗದೆ ಬಹಳಪೇಚಾಡಿಕೊಂಡಿದ್ದೇನೆ. ನಿಮ್ಮ ಪುಣ್ಯ, ದಯಮಾಡಿರಿ!" ಎಂದು ಪ್ರಾರ್ಥಿಸಿಕೊಂಡನು.

"ಪಾಪ ಗುರುಗಳೇ! ಈ ಕಟುಕ ಕರ್ಮದವನ ಮೇಲೆ ಕರುಣೆ ತೋರಿಸಿಬಿಡಿರಿ. ಹೇಗೋ ಬದುಕಿಕೊಂಡಿರಲಿ!" ಎಂದನು ಕಾಳೀವರ್ಮ.

ಕರಡಿಕೆಂಗಣ್ಣ ಮಾಂತ್ರಿಕನು ಮಂತ್ರದ ಚಪಗೊಡಲಿಯನ್ನು ತನ್ನ ಕೈಯಲ್ಲಿ ತೆಗೆದುಕೊಂಡು, ಏನೋ ಮಂತ್ರವನ್ನು ಉಚ್ಚರಿಸುತ್ತ ಕೊಡಲಿಯನ್ನು ಕಟುಕಕರಡಿಯವನ ಪಾದಗಳಿಗೆ ತಾಗಿಸಿದನು. ಕೂಡಲೇ ಅವನ ಪಾದಗಳು ಮನುಷ್ಯನ ಪಾದಗಳಾಗಿ ಬದಲಾದುವು. ತರುವಾಯ ಕೊಡಲಿಯನ್ನು ಅವನ ತಲೆಯವರೆಗೂ ತಾಗಿಸುತ್ತಾಹೋದನು. ಮರುಕ್ಷಣದಲ್ಲಿ ಕಟುಕಕರಡಿಯವನ ಕರಡಿ ರೂಪವೂ ಹೋಗಿ ಶರೀರವು ಕುತ್ತಿಗೆಯರೆಗೂ ಮನುಷ್ಯನದಾಯಿತು. ತಲೆಮಾತ್ರ ಕರಡಿಯದೇ ಆಗಿ ಉಳಿಯಿತು. "ಆಯಿತಪ್ಪ, ಇಷ್ಟೇ" ಎಂದು ಸುಮ್ಮನಾದನು ಕರಡಿಕೆಂಗಣ್ಣ.

ತಾನು ಎಂದಿನಂತೆ ಮನುಷ್ಯನಾಗಿಬಿಟ್ಟೆನೆಂದುಕೊಂಡು ಕಟುಕನು, ಕರಡಿಕೆಂಗಣ್ಣ ಮಾಂತ್ರಿಕನ ಮುಂದೆ ಸಾಷ್ಟಾಂಗ ಪ್ರಣಾಮ ಮಾಡಿ ಏಳುತ್ತ, "ದಯಾಮಯರಾದ ಮಾಂತ್ರಿಕ ಪ್ರಭೂ! ಎಷ್ಟು ದಿನಗಳ ಮೇಲೆ ನಾನು ಹಿಂದಿನ ಮನುಷ್ಯನಾದೆ! ಜೀವಕ್ಕೆ ಎಷ್ಟೊಂದು ಸಂತೋಷವಾಗಿದೆಯೆಂದರೆ ಮಾತಿನಿಂದ ಹೇಳಲು ಸಾಧ್ಯವಿಲ್ಲ! ನೀವು ಸಾಕ್ಷಾತ್ ದೇವರೇ ಸರಿ!" ಎಂದನು.

ಆ ಮಾತು ಕೇಳಿ ಕಳ್ಳರನಾಯಕ ನಾಗಮಲ್ಲನು ಕಿಟಕಿಟನೆ ನಗತೊಡಗಲು, ಅವನನನುಸರಿಸಿ ಎಲ್ಲರೂ ದೊಡ್ಡ ಧನಿಯಿಂದ ನಿರರ್ಗಳವಾಗಿ ನಕ್ಕರು. ಅದನ್ನು ನೋಡಿ ಕಟುಕನು ಆಶ್ಚರ್ಯಪಡುತ್ತ ಅವರನ್ನೆಲ್ಲಾ ಪ್ರಶ್ನಾರ್ಥಕವಾಗಿ ಮಿಕಿಮಿಕಿ ನೋಡಿದನು. ಆಗ ಉಗ್ರದಂಡ ರಾಕ್ಷಸನು ತನ್ನ ಕಲ್ಲಿನ ಗದೆಯಿಂದ ಅವನ ತಲೆಯನ್ನು ಮುಟ್ಟಿ, "ಕಣ್ಣಿದ್ದೂ ಕಾಣಲಾಗದ ಕುರುಡಾ! ಈ ನಿನ್ನ ಮುಖ ತಲೆ ಸಾಕ್ಷಾತ್ ಕರಡಿಯದೇ. ಕುತ್ತಿಗೆಯವರೆಗೆ ಮನುಷ್ಯನಾದದ್ದು ನಿಜ. ತಲೆ ಹೀಗೇ ಇರುತ್ತದೆಂದಾಯಿತು." ಎಂದನು.

ಕಟುಕನು ಎರಡು ಕೈಗಳಿಂದ ತಲೆಯನ್ನು ತಡವಿಕೊಂಡು, "ಅಯ್ಯೋ" ಎಂದು ಆರ್ತನಾದ ಮಾಡಿ, "ಮಾಂತ್ರಿಕ ಪ್ರಭುವೇ! ಈ ಅನ್ಯಾಯವೇನಿದು? ಮನುಷ್ಯನ ಶರೀರವೂ ಕರಡಿಯ ತಲೆಯೇ? ಕೇವಲ ಕರಡಿಗಿಂತಲೂ ವಿಕೃತವಾಯಿತಲ್ಲಾ! ನನ್ನನ್ನು

ನೋಡಿದವರೆಲ್ಲ ನಗುತ್ತಾರೆ ಇನ್ನು! ಈ ನಗೆ ಪಾಟಲಿನಲ್ಲಿ ನನ್ನ ವೀರಧೀರ ಕಾರ್ಯಗಳೆಲ್ಲ ಮಣ್ಣು ತಿಂದು, ರಾಜಾಜ್ಞೆಯ ಕಟುಕ ಕಾರ್ಯವನ್ನಾದರೂ ಹೇಗೆ ನೆರವೇರಿಸಿಯೇನು? ಹೇಗೆ ಬದುಕು ಸಾಗಿಸಿಯೇನು? ಕೆಟ್ಟೆನಲ್ಲಾ ಮಾಂತ್ರಿಕ ಪ್ರಭುಗಳೇ! ಬದುಕಿಯೂ ಸತ್ತ ಹಾಗೆ ನರಕಯಾತನೆ ಯಾಯಿತಲ್ಲಾ!" ಎಂದು ಗೋಳಿಟ್ಟನು.

ಕರಡಿ ಕೆಂಗಣ್ಣನು ಚಿಂತೆಯಿಂದ ತಲೆತಗ್ಗಿಸಿ, "ಅಪ್ಪಾ ಕಟುಕ ಕರ್ಮಿಷ್ಠ! ಹೀಗೆ ನಿರಾಶನಾಗಿ ವಿರಾಗಿಯಾಗಿ ಬಿಡಬೇಡ. ಪ್ರಸ್ತುತಕ್ಕೆ ಇರುವ ತಲೆಯಿಂದಲೇ ತೃಪ್ತನಾಗಿ ಧೈರ್ಯದಿಂದಿರು. ತಲೆ ಕರಡಿಯದಾದರೇನಾಯಿತು? ಅದರೊಳಗಿರುವ ಬುದ್ಧಿ ಮನಷ್ಯನದೇ. ನನ್ನ ಸರ್ವಸಾಧಕವಾದ ಮಂತ್ರದಂಡವನ್ನು ಆ ಮಾಯಾ ಮರ್ಕಟ ರೂಪದಲ್ಲಿ ಬಂದ ದುಷ್ಟ ಭ್ರಾಂತಿಮತಿ ಅಪಹರಿಸಿದ್ದರಿಂದ, ನನ್ನ ಮಂತ್ರಶಕ್ತಿ ಸ್ವಲ್ಪಕ್ಷೀಣಿಸಿ ಬಿಟ್ಟಿದೆ. ಆದರಿಂದಲೇ ನಿನ್ನನ್ನು ಪೂರ್ತಿ ಮಾನವನನ್ನಾಗಿ ಮಾಡಲು ಸಾಧ್ಯವಾಗಲಿಲ್ಲ. ಅದು ಸಿಕ್ಕಿದರೆ ಏನು ಬೇಕಾದರೂ ಮಾಡಬಲ್ಲೆ. ಅದು ನನಗೆ ಸಿಕ್ಕುವಂತೆ ನೀನೂ ಪ್ರಯತ್ನಿಸಬೇಕು!" ಎಂದನು.

ಕಟುಕನು ಕಣ್ಣೀರು ಸುರಿಸುತ್ತ "ಈ ರೂಪದಲ್ಲಿ ನಾನೇನು ಸಹಾಯಮಾಡೇನು? ಈ ವಿಚಿತ್ರ ರೂಪದಲ್ಲಿರುವ ನನಗೆ ಜಿತಕೇತು ಮಹಾರಾಜರು ಮತ್ತೆ ಪ್ರಧಾನ ಕಟುಕನ ಉದ್ಯೋಗವನ್ನು ಕೊಡುವರೇ? ತೆಗೆದು ಹಾಕುತ್ತಾರೆ. ಆಮೇಲೆ ಹೇಗೆಬದುಕಲಿ? ಏನು ಮಾಡಲಿ? ಈ ಹಾಳು ಮೂತಿ ಹೊತ್ತುಕೊಂಡು ಹೇಗೆ ತಿರುಗಲಿ?" ಎಂದು ಹಲುಬಿದನು.

ಅವನ ದುಃಖವನ್ನು ನೋಡಿ ಕಾಳೀವರ್ಮನು ಕನಿಕರಪಡುತ್ತ, ಅವನ ಹೆಗಲಿಗೆ ಕೈಹಾಕಿ ತಟ್ಟುತ್ತ, "ಈ ಭಲ್ಲೂಕಾವತಾರಕ್ಕಾಗಿ ಚಿಂತಿಸಬೇಡ ಬಿಡಪ್ಪಾ. ಮಾಂತ್ರಿಕ ಕೆಂಗಣ್ಣ ಗುರುಗಳು ತಮ್ಮ ಮಂತ್ರದಂಡವನ್ನು ಕಳೆದುಕೊಂಡ ಸಂಗತಿಯನ್ನು ತಿಳಿದು, ಜಿತಕೇತು ರಾಜನ ಮಂತ್ರಿ ಜೀವಗುಪ್ತನಿಗೆ ಹೊಸ ಧೈರ್ಯ ಬಂದಿದೆ. ನಮ್ಮನ್ನೆಲ್ಲಾ ಹತಮಾಡಿ ಬಿಡುವ ಉದ್ದೇಶದಿಂದಲೇ ಸೈನಿಕರನ್ನು ತೆಗೆದುಕೊಂಡು ನಮ್ಮ ಬೆಂಬತ್ತಿ ಬಂದಿದ್ದಾನೆ. ಅತ್ತನೋಡು! ದೂರದಲ್ಲಿ ಆ ಮಂತ್ರಿ ಹೇಗೆ ನೋಡುತ್ತಿದ್ದಾನೆ! ಸೈನಿಕರು ಹೇಗೆ ಸಿದ್ಧರಾಗಿ ನಿಂತಿದ್ದಾರೆ! ಹೀಗೆ ಈಗ ಮೈ ಮೇಲೆ ಬರುವುದನ್ನು ನೋಡುವುದು ಬಿಟ್ಟು, ಮುಂದೇನೋ ಆಗುವುದೆಂದು ಅತ್ತರೇನು ಪ್ರಯೋಜನ?" ಎಂದನು.



ಕಟುಕನು ಆ ಕಡೆಗೆ ಲಕ್ಷ್ಯವಿಟ್ಟು ನೋಡಿದನು. ಅಲ್ಲಿ ಜೀವಗುಪ್ತನು ಕೂಡಾ ಮುಂದುವರಿಯಲು ಧೈರ್ಯಸಾಲದೆ, ಪರಿವಾರವನ್ನು ನೋಡಿ, ಏನೋ ಹೇಳಿಕೊಂಡಿದ್ದನು. ಜೀವಗುಪ್ತನನ್ನು ನೋಡಿ ಕಟುಕನು ಎದೆಯಲ್ಲಿ ನಡುಗುತ್ತ, "ಆ ರಾಜನು ಏನು ಮಾಡುವನೋ ಹೇಳಲಾಗದಿದ್ದರೂ ಈ ಮಂತ್ರಿ



ಮಾತ್ರ ಖಂಡಿತ ನನ್ನ ತಲೆಹಾರಿಸುತ್ತಾನೆ. ನಾನು ಎಲ್ಲಾವಿಧದಲ್ಲಿಯೂ ಕೆಟ್ಟೆನಲ್ಲಾ!" ಎಂದನು ಕಂದಿಹೋದ ಕಂಠಸ್ವರದಿಂದ.

ಕರಡಿಕೆಂಗಣ್ಣನು ಚಪಗೊಡಲಿಯನ್ನು ಕಟುಕಕರಡಿಮುಖದವನಿಗೆ ತಿರುಗಿ ಕೊಟ್ಟು, "ಕಟುಕ ಕವರ್ಮಾ! ನಿನ್ನಂಥವನು ಹೀಗೆ ಧೈರ್ಯ ಗೆಟ್ಟು ನೆಲಹಿಡಿಯುವದೆಂದರೇನು? ನನ್ನ ಮಾತು ಕೇಳು. ನಿನ್ನಲ್ಲಿ ಸ್ವಲ್ಪವಾದರೂ ಧೈರ್ಯವೂ ಸಾಹಸವೂ ಇದ್ದರೆ ಈ ಮಂತ್ರಶಕ್ತಿಯ ಚಪಗೊಡಲಿ ನಿನ್ನನ್ನು ಎಲ್ಲಾ ಆಪತ್ತುಗಳಿಂದಲೂ ಕಾಪಾಡುತ್ತದೆ." ಎಂದು ಹೇಳಿ, ತನ್ನ ಸೊಂಟದಲ್ಲಿ ನೇತಾಡುವ ಒರೆಯೊಳಗಿನಿಂದ ಕತ್ತಿಯನ್ನು ತೆಗೆದು "ಮರ್ಕಟ ರೂಪದ ಕಳ್ಳನು ಕದ್ದುಕೊಂಡು ಹೋದ ಮಂತ್ರದಂಡದಷ್ಟು ಶಕ್ತಿ ಈ ಕತ್ತಿಗೆ ಇಲ್ಲದಿದ್ದರೂ ನನ್ನ ರಕ್ಷಣೆಗೆ ಈ ಕತ್ತಿಯೊಂದೇ ಸಾಕು" ಎಂದನು. "ರಾಜನಿಂದ ಬರುವ ದಿನಭತ್ಯ, ನೌಕರಿ, ಸಂಬಳ ಮುಂತಾದ್ದು ಇನ್ನು ನನಗೆ ಬಂದೀತೆ? ಇಲ್ಲಿರುವ ಕಳ್ಳ ನಾಗಮಲ್ಲನ ಹಾಗೆ ದಾರಿದೋಚಿ ಬದುಕುವಷ್ಟು ನೀಚನೇ ನಾನು?" ಎಂದನು ಕಟುಕ ತನ್ನ ಪಲ್ಲವಿಯ ಧಾಟಿಯಲ್ಲಿಯೇ.

ಆ ಮಾತು ಕೇಳಿದ ಕೂಡಲೇ ಕಳ್ಳ ನಾಗಮಲ್ಲನಿಗೆ ಮಹಾ ಕೋಪವೆದ್ದಿತು. ಅವನು "ಆಂ" ಎಂದು ರೋಷದಿಂದ ಗರ್ಜಿಸಿ, ತನ್ನ ಸೊಂಟದಲ್ಲಿ ನೇತಾಡುತ್ತಿದ್ದ ಕತ್ತಿಯನ್ನು ಕೆಳಗೆ ಹಾಕಿ, "ಎಲೆಲಾ! ನರಕರಡಿ ಸಂಕರ ರೂಪದ ಭಂಡಾ! ಏನು ಬೊಗಳಿದೆ? ನಾನು ನೀಚನೆ? ಮಂದಿ ಮಾರ್ಬಲ ಸೈನ್ಯಗಳ ಸಹಾಯದಿಂದ ಯಾವ ಕಡ್ಡೀ ವೀರನಾದರೂ ರಾಜ್ಯಭಾರ ಮಾಡಿ ಮೆರೆಯಬಹುದು. ಒಬ್ಬಂಟಿಗನಾಗಿ ಕಾಡಿನಲ್ಲಿ ದಾರಿಹೊಡೆದು ಬದುಕ ಬೇಕಾದರೆ ನಿಜವಾದ ಧೈರ್ಯ ಶೌರ್ಯ ಪ್ರತಾಪಗಳು ಬೇಕು ಗೊತ್ತಾ? ಇಕೋ ನನ್ನ ಕತ್ತಿಯನ್ನು ಬಿಸುಟಿದ್ದೇನೆ. ನಿನ್ನ ಮಂತ್ರದ ಕೊಡಲಿ ಕೆಳಗೆಹಾಕು. ಬಾ ನನ್ನೊಂದಿಗೆ ಮಲ್ಲ ಯುದ್ಧಕ್ಕೆ!" ಎಂದು ತೊಡೆ ತೋಳುಗಳನ್ನು ಛಟಛಟನೆ ತಟ್ಟತೊಡಗಿದನು.

ಕರಡಿಕೆಂಗಣ್ಣನು ಕಣ್ಣು ಕೆಂಪು ಮಾಡಿಕೊಂಡು ಎಲ್ಲರ ಕಡೆಗೂ ಒಮ್ಮೆ ನೋಡಿ, ಕಾಳೀವರ್ಮನೊಂದಿಗೆ, "ಕಾಳೀವರ್ಮಾ! ಈ ಬುದ್ಧಿಗೇಡಿಗಳಿಗೆ ತಾವೆಲ್ಲಾ ಎಂತಹ ಅಪಾಯಕರವಾದ ಸ್ಥಿತಿಯಲ್ಲಿರುವೆವೆಂದು ಅರ್ಥವಾದಂತಿಲ್ಲ. ಎಲ್ಲರನ್ನೂ ಹಿಡಿದು ಶಿರಚ್ಛೇದ ಮಾಡಲು ಒಂದು ಕಡೆಯಲ್ಲಿ ಜಿತಕೇತು ರಾಜನ ಮಂತ್ರಿ ನಿಂತು ನೋಡುತ್ತಿದ್ದಾನೆ. ಇನ್ನು ಕೋಟೆಯೊಳಗೆ ದುರ್ಮುಖರಾಜನೇ ಗೆದ್ದರೂ, ಸಾಮಂತನೇ ಗೆದ್ದರೂ ನಮಗೆ ಮೇಲಾಗುವುದಕ್ಕಿಂತ ಹೆಚ್ಚು ಕೆಡುಕೇ ಕಾದಿದೆ. ಆ ಮರ್ಕಟ ದುಷ್ಟನು ಅವರನ್ನು ನಮ್ಮ ಮೇಲೆ ಬೀಳುವಂತೆ ತಿರುಗಿಸದೆ ಬಿಡಲಾರ. ಇದರೆಡೆಯಲ್ಲಿ ಇವರದೊಂದು ಒಳಗಿನ ಗಲಾಟೆ! ಛೀಛೀ." ಎಂದನು.

ಕಾಳೀವರ್ಮನು ಕೋಪದಿಂದ ಕತ್ತಿ ಮೇಲೆತ್ತಿ, "ಮಾಂತ್ರಿಕ ಗುರುಗಳ ಮಾತು ಕೇಳಿಸಿತೋ ಇಲ್ಲವೋ ? ಇನ್ನೀಗ ನಿಮ್ಮೆಲ್ಲರಿಗೂ ಯಾರು ನಾಯಕನೆಂದು ಗೊತಾಯಿತೇನೋ ? " ಎಂದು ಕೂಗಿಕೇಳಿದನು.

ಉಗ್ರದಂಡ ರಾಕ್ಷಸನ ಹೊರತು ಉಳಿದೆಲ್ಲರೂ, "ಕಾಳೀವರ್ಮರಿಗೆ ಜೈ ! " ಎಂದು ಮೂರು ಸಾರಿ ಕೂಗಿದರು.

ಅದನ್ನು ನೋಡಿ ಕಾಳೀವರ್ಮನು ತೃಪ್ತಿಯಿಂದ ತಲೆಯಾಡಿಸಿ, ರಾಕ್ಷಸ ಉಗ್ರದಂಡನ ಬಳಿಗೆ ಬರಲು ನೋಡಿದನು. ಆಗ ಜೀವಗುಪ್ತನ ಕಡೆಯಿಂದ ಆಶ್ವಿಕ ನೊಬ್ಬನು. ಕತ್ತಿಯನ್ನು ತಲೆಕೆಳಗಾಗಿ ಹಿಡಿದುಕೊಂಡು ವೇಗವಾಗಿ ಅವರ ಬಳಿಗೆ ಬಂದು ಕುದುರೆಯನ್ನು ನಿಲ್ಲಿಸಿ, "ಜಿತಕೇತು ಮಹಾರಾಜರ ಮಂತ್ರಿ ಜೀವ ಗುಪ್ತರ ಕಡೆಯಿಂದ ಒಂದು ಮುಖ್ಯ ಸಂದೇಶ ತಂದಿದ್ದೇನೆ" ಎಂದನು. "ಓ ಹೋ ! ಆದಕ್ಕೇ ಕತ್ತಿಯನ್ನು ಕೆಳ ಮುಖವಾಗಿ ಹಿಡಿದಿದ್ದೀಯಾ ? ಒಳ್ಳೆಯದು. ಏನು ಆ ಸಂದೇಶ ?" ಎಂದು ಕೇಳಿದನು ಕಾಳೀವರ್ಮ.

"ಇಲ್ಲಿರುವ ನಮ್ಮ ನಗರದ ಪ್ರಧಾನ ಕಟುಕ ನೌಕರನನ್ನು ಕೂಡಲೇ ತನ್ನ ಸಮಕ್ಷಮಕ್ಕೆ ಬರ ಬೇಕೆಂದು ಮಂತ್ರಿಯವರು ಆಜ್ಞಾಪಿಸುತ್ತಾರೆ. ಬರು ವಾಗ ಮಹಾರಾಜರಿಂದ ಶಿರಚ್ಛೇದ ಶಿಕ್ಷೆಪಡೆದು ತಪ್ಪಿಸಿಕೊಂಡು ತಿರುಗುವ ಕಾಳೀವರ್ಮನೆಂಬ ಅಪರಾಧಿಯನ್ನೂ ತನ್ನೊಂದಿಗೆ ಬಂಧಿಸಿ ಕರೆತರ ಬೇಕೆಂದೂ ಹೇಳಿದ್ದಾರೆ. ಏನು ಹೇಳುವಿರಿ ?" ಎಂದನು ಆ ಸಂದೇಶವಾಹಕ.

ಆ ಮಾತುಗಳನ್ನು ಕೇಳಿ ಕರಡಿಕೆಂಗಣ್ಣನು ಕಿರುನಗೆ ನಕ್ಕು. "ಏನಪ್ಪಾ, ಕಟುಕ ನೌಕರಾ ! ನಿನ್ನ ಮಂತ್ರಿಯ ಆಜ್ಞೆಯನ್ನು ಕೇಳಿದೆಯಾ ? ಈಗ ಏನು ಮಾಡುವಿ ?" ಎಂದು ಕೇಳಿದನು.

ಕಟುಕನು ಏನು ಹೇಳಲೂ ತೋರದವನಾಗಿ. ಕೆಲವು ಕ್ಷಣಗಳವರೆಗೆ ತಲೆಬಗ್ಗಿಸಿಕೊಂಡಿದ್ದು, ಆಮೇಲೆ ತಲೆಯೆತ್ತಿ, "ಕಾಳೀವರ್ಮದೊರೇ ! ಏನು ನಿಮ್ಮ



ಆಜ್ಞೆ? ಈ ಕರಡಿ ತಲೆಯನ್ನು ಹೊತ್ತುಕೊಂಡು ನಾನು ಚಂದ್ರಶಿಲಾ ನಗರಕ್ಕೆ ಹೋಗುವುದೆಂದರೆ, ಅಲ್ಲಿ ಬೀದಿ ಮಕ್ಕಳಿಂದ ಕಲ್ಲಿನ ಹೊಡೆತ ತಿನ್ನುತ್ತ ಪ್ರಾಣ ಕಳೆದುಕೊಳ್ಳಲು ಹೋದ ಹಾಗೆಯೇ ಆಗುತ್ತದೆ" ಎಂದನು.

ಕಾಳೀವರ್ಮನು ಕತ್ತಿಯಿಂದ ಮೃದುವಾಗಿ ಅವನ ಬೆನ್ನಿನ ಮೇಲೆ ತಟ್ಟುತ್ತ, "ಎಲೋ ಕಟುಕ ರೊಡೆಯನೇ, ನಿನ್ನ ಸ್ವಾಮಿ ಭಕ್ತಿ ಮೆಚ್ಚುವಂತ ಹುದೇ. ಪೂರ್ತಿ ನಿರಾಶನಾಗಿ ಬಿಡಬೇಡ. ನಾವೀಗ ಮೊದಲು ಈ ಕೋಟೆಯೊಳಗೆ ಪ್ರವೇಶಿಸಿ ಆ ಮಾಯಾ ಮರ್ಕಟನನ್ನು ಹಿಡಿಯಬೇಕು. ಸಮಯ ಮೀರಿ ಹೋಗದಿದ್ದರೆ ಆ ದುರ್ಮುಖರಾಜನ ಪ್ರಾಣ ವನ್ನು ಕೂಡಾ ಕಾಪಾಡಬೇಕು. ಜಿತಕೇತು ರಾಜ ನೊಂದಿಗೆ ಹೋಲಿಸುವಾಗ ದುರ್ಮುಖರಾಜನೇ ಎಷ್ಟೋ ಒಳ್ಳೆಯವನಾಗಿ ಕಾಣುತ್ತಾನೆ. ಈಗ ಮಂತ್ರಿ ಜೀವಗುಪ್ತನ ಸಂದೇಶ ತಂದವನಿಗೆ ಕೊಡ ಬೇಕಾದ ಉತ್ತರ, ನಿನ್ನ ಚಪಗೊಡಲಿಯಿಂದ ಅವನ ತಲೆಯನ್ನಾದರೂ ಕಡಿ, ಅಲ್ಲಾ ಅವನ ಕತ್ತಿಯನ್ನು ಎರಡು ತುಂಡು ಮಾಡಿ ಓಡಿಸು. ಅದು ನಿನ್ನ ಇಷ್ಟ!" ಎಂದನು.

ಮರುಕ್ಷಣವೇ ಕಟುಕಭಲ್ಲೂಕನು "ಜೈ ಭೈರವಾ!" ಎಂದು ಗರ್ಜಿಸಿ ಕುಪ್ಪಳಿಸುತ್ತ, ಆ ಸಂದೇಶ ತಂದ ದೂತನ ಮೇಲೆ ಹಾರಿ ಅವನ ಕೈಯಲ್ಲಿದ್ದ ಕತ್ತಿಯನ್ನು ಎಳೆದುಕೊಂಡು ನೆಲಕ್ಕೆ ಅಪ್ಪಳಿಸಿ ಎರಡು ತುಂಡು ಮಾಡಿ ದೂರಬಿಸುಟು, "ಎಲವೋ ದೂತಾಧಮಾ! ನಾನು ಜಿತಕೇತು ರಾಜನ ಉಪ್ಪು ತಿಂದುದಕ್ಕಾಗಿ ಕಟುಕ ಸೇವೆ ಮಾಡಿದ ಋಣ ಇಂದಿಗೆ ತೀರಿ ಹೋಯಿತು. ಮರ್ಯಾದೆ ಉಳಿಸಿಕೊಂಡು ಆ ಮಂತ್ರಿ ಜೀವಗುಪ್ತ ಇಲ್ಲಿಂದ ಹೋಗದಿದ್ದರೆ ಅವನ ತಲೆಯನ್ನು ವನಭೈರವನಿಗೆ ಬಲಿ ಕೊಡುತ್ತೇನೆಂದು ಹೇಳು! ಓಡು!" ಎಂದನು.

ಜೀವಗುಪ್ತನ ದೂತನು ಆರ್ತನಾದ ಮಾಡಿ ತನ್ನ ಕುದುರೆಯನ್ನು ಹಿಂದಕ್ಕೆ ತಿರುಗಿಸಿದನು. ಅಷ್ಟರಲ್ಲಿ ಬಂಧಿಸಲ್ಪಟ್ಟ ಕೋಟೆಯ ದ್ವಾರದ ಕಡೆಯಿಂದ ಭಟಭಟವೆಂಬ ಶಬ್ದವೂ, ಅದರ ಬೆನ್ನ ಹಿಂದೆಯೇ "ಕಾಳೀವರ್ಮನಿಗೆ ಜೈ!" ಎಂಬ ಜಯ ಘೋಷ ಣವೂ ಕೇಳಿಬಂದಿತು.

ಕರಡಿ ಕೆಂಗಣ್ಣನೂ ಇತರರೂ ಆಶ್ಚರ್ಯದಿಂದ ಆ ಕಡೆಗೆ ತಲೆ ತಿರುಗಿಸಿ ನೋಡಿದರು. ಕೋಟೆಯ ಬಾಗಿಲು ಧಗಧಗನೆ ಸುಟ್ಟು ಹೋಗುತ್ತಿದ್ದಿತು. ಅಲ್ಲಿ ಆಟವಿಕನೂ, ಕಳ್ಳರನಾಗಮಲ್ಲನೂ, ಅವನ ಅನು ಚರರೂ ಉರಿಯುವ ಕೊಳ್ಳಿಗಳನ್ನು ಕೈಯಲ್ಲಿ ಹಿಡಿದುಕೊಂಡು ಕುಪ್ಪಳಿಸಿಕೊಂಡಿದ್ದರು. ಹೊಗೆ ಆಕಾಶದ ಕಡೆಗೆ ಹರಡುತ್ತಿದ್ದಿತು. —(ಇನ್ನೂ ಇದೆ)

